Vol - 11 July 2012 Issue No. 06 ₹ 5.00/-

# ಕರ್ನಾಟಕ ಸ್ಕ್ಯಾಟ್ ಮತ್ತು ಗೈಡ್

ವಾರ್ತಾ ಪತ್ರಿಕೆ



# Karnataka Scout & Guide

*News Magazine*

## HEARTY CONGRATULATIONS

**The Bharat Scouts & Guides, Karnataka extends its Best Wishes and Scout / Guide Greetings**



**Sri PRANAB MUKHERJEE**
His Excellency the Hon'ble President of India



**Sri JAGADISH SHETTAR**
Hon'ble Chief Minister of Karnataka




ದಿನಾಂಕ 13-07-2012ರಂದು ರಾಯಚೂರು ತಾಲ್ಲೂಕ ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಶ್ರೀ ಜಿ. ಮಲ್ಲಿಕಾರ್ಜುನ್, ಕ್ಷೇತ್ರಶಿಕ್ಷಣಾಧಿಕಾರಿಗಳು ಉದ್ಘಾಟಿಸಿ ಮಾತನಾಡುತ್ತಿರುವುದು. ಚಿತ್ರದಲ್ಲಿ ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀಮತಿ ಅಜೀಜಾ ಸುಲ್ತಾನ, ಜಿಲ್ಲಾ ಆಯುಕ್ತರು (ಗೈಡ್ಸ್), ಶ್ರೀ ಗೋವಿಂದರಾಜು, ಅಧ್ಯಕ್ಷರು, ಸ್ಥಳೀಯ ಸಂಸ್ಥೆ ಮತ್ತು ಇತರರನ್ನು ಕಾಣಬಹುದು



ದಿನಾಂಕ 19-07-2012ರಂದು ಉಡುಪಿ ಜಿಲ್ಲೆ ಕುಂದಾಪುರ ಸ್ಥಳೀಯ ಸಂಸ್ಥೆ ಆಶ್ರಯದಲ್ಲಿ ನಡೆದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಗೋಪಾಲಶೆಟ್ಟಿಯವರು ಉದ್ಘಾಟಿಸುತ್ತಿರುವುದು. ಚಿತ್ರದಲ್ಲಿ ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳನ್ನು ಕಾಣಬಹುದು.



ದಿನಾಂಕ 07-07-2012ರಂದು ರಾಯಚೂರು ಜಿಲ್ಲೆ ಮಾನ್ವಿ ಲಯೋಲಾ ಶಾಲೆಯಲ್ಲಿ ಸ್ಕೌಟ್ಸ್‌ಗಳು ಸಸಿನೆಡವ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದರು ಶಾಲೆಯ ಆಡಳಿತ ಮಂಡಳಿಯ ಅಧ್ಯಕ್ಷರಾದ ರೆವರೆಂಡ್ ಫಾದರ್ ವಿಜಯ್‌ಪ್ರಭು ಇವರನ್ನು ಕಾಣಬಹುದು.




ಬೀದರ್‌ಜಿಲ್ಲೆ ಬಸವಕಲ್ಯಾಣದಲ್ಲಿ ನಡೆದ ಮಲೇರಿಯ ನಿಯಂತ್ರಣ ಮಾಸಾಚರಣೆಯ ಅಂಗವಾಗಿ ಏರ್ಪಡಿಸಿದ ಕಾರ್ಯಕ್ರಮದಲ್ಲಿ ಸ್ಕೌಟ್ಸ್/ಗೈಡ್ಸ್‌ಗಳು ಭಾಗವಹಿಸಿದರು.




ದಿನಾಂಕ 06-07-2012ರಂದು ಗಂಗಾವತಿಯಲ್ಲಿ ನಡೆದ ಸ್ಕೌಟರ್ಸ್/ಗೈಡರ್ಸ್ ಮಾವೇಶವನ್ನು ಶ್ರೀ ಹೆಚ್. ಎಸ್. ರಾಮರಾವ್, ನಿರ್ದೇಶಕರು, ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಬೆಂಗಳೂರು (ಡಿ.ಎಸ್‌ಈ.ಆರ್.ಟಿ) ಇವರು ಉದ್ಘಾಟಿಸಿ ಮಾತನಾಡುತ್ತಿರುವುದು ಚಿತ್ರದಲ್ಲಿ ಶ್ರೀ ದೊಡ್ಡಬಸಪ್ಪ ನೀರಲಕೇರಿ, ಕ್ಷೇತ್ರ ಶಿಕ್ಷಣಾಧಿಕಾರಿ ಹಾಗೂ ಸ್ಕೌಟ್ಸ್-ಗೈಡ್ಸ್ ಪದಾಧಿಕಾರಿಗಳನ್ನು ಕಾಣಬಹುದು.



ದಿನಾಂಕ 28-06-2012ರಂದು ದೇವನಹಳ್ಳಿಯಲ್ಲಿ ನಡೆದ ಸ್ಕೌಟರ್ಸ್-ಗೈಡರ್ಸ್ ಸಮಾವೇಶದಲ್ಲಿ ಶ್ರೀ ಹನುಮಂತಪ್ಪನವರ್, ಕ್ಷೇತ್ರಶಿಕ್ಷಣಾಧಿಕಾರಿಗಳು, ಶ್ರೀ ಶಿವಪ್ಪ, ಅಧ್ಯಕ್ಷರು, ತಾಲ್ಲೂಕ ಪಂಚಾಯತ್, ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ರಾಜೇಂದ್ರ ಬಾಬು ಪ್ರಸಾದ್ ಹಾಗೂ ಇತರರನ್ನು ಕಾಣಬಹುದು.

# Editor's Desk

While the growth of our Movement is ultimately the result of delivering high-quality Scouting/ Guiding, haphazard growth is not sustainable. The factors affecting the growth and development of associations vary, but, whatever the situation, offering better Scouting/Guiding to more young people requires a strategic focus.

The professional meet we convened in Mysore during the month is towards the approach as said above. As a strategic step the professional's have tried their best to open up their minds and slowly ice is melting. They have many problems including personal, professional and organisational, which we have to look in to and facilitate them to solve them and come out of the clutches of one sided management. It should be from both sides workable and achievable plan which yields results. I mean professional and volunteers at every level State/ District/ Local.

Our next step should be towards solving the problems raised by professionals and training them to achieve the targets which have been given to them. Means another elaborate meet with clear plan and achievable / sustainable/ measurable objectives with expertise touch. The bright side of the process is that the head of the Karnataka State Bharat Scouts & Guides has applauded the efforts and has encouraged for similar such efforts in all Divisions and Districts.

This signals that we have selected the right way to make our State one of the best in the country and our team will surely prove their capacities and competencies. Realise that the responsibility is more serious and everyone has to reach depth of the system. The youth Programme should be given major chunk of our efforts and next being Adult Resources. Other areas like Growth, Management, Finance and PR/Communication comes at next level. However small the task may be it plays very important role and the major area of Youth Programme needed to be reviewed.

Friend's the process is on and we need to rope in more dynamic and willing individuals who are ready to spare their valuable time and expertise to rejuvenate the moment with full of life. Hope we can expect the young generation will come out and become part of the mission.

M.A. KHALID
Editor

# ಮುಖ್ಯ ಆಯುಕ್ತರ ನುಡಿ......

ಆತ್ಮೀಯರೆ,

ಕಳೆದ ಮೂರು ತಿಂಗಳಕಾಲ ನನ್ನ ಮಕ್ಕಳ ಆಹ್ವಾನದ ಮೇರೆಗೆ ನಾನು ಪುತ್ತು ನನ್ನ ಪತ್ನಿ ಅಮೇರಿಕಾದ ಕ್ಯಾಲಿಫೋರ್ನಿಯಾ - ಟೆಕ್ಸಾಸ್ - ಹಾಗು ಕೆನಡಾ ದೇಶಗಳಿಗೆ ಭೇಟಿನೀಡಿ ಈ ತಿಂಗಳ 12 ರಂದು ವಾಪಸಾಗಿದ್ದೇವೆ.

ನಮ್ಮ ಸಂಸ್ಥೆಯ ಹಿರಿಯ ಪದಾಧಿಕಾರಿಗಳೂ - ಸಜ್ಜನರೂ, ಸಂಸ್ಥೆಯ ಎಲ್ಲ ಕೆಲಸಕಾರ್ಯಗಳಲ್ಲಿ ಪ್ರಕಟಣೆಗಳಲ್ಲಿ ತಮ್ಮ ಅಪಾರವಾದ ಅನುಭವ ಜ್ಞಾನದಿಂದ ಮಾರ್ಗದರ್ಶನ ಮಾಡುತ್ತಿರುವ ರಾಜ್ಯದ ಹಿರಿಯ ಜಾನಪದ ತಜ್ಞರಾದ ಶ್ರೀ ಗೊ ರು. ಚನ್ನಬಸಪ್ಪನವರು ತಮ್ಮ ವಿಚಾರಪೂರಿತ ಲೇಖನಗಳಿಂದ ಚಳವಳಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ನನ್ನಂತ ಸಹಸ್ರಾರು ಸ್ಕೌಟ್-ಗೈಡ್ ಕಾರ್ಯಕರ್ತರುಗಳಿಗೆ ಕಬ್-ಬುಲ್‌ಗಳಿಗೆ - ಸ್ಕೌಟ್-ಗೈಡ್‌ಗಳಿಗೆ ಸೂಕ್ತ ಮಾರ್ಗದರ್ಶನ ಮಾಡಿರುತ್ತಾರೆ. ಚಳವಳಿಯ ಪರವಾಗಿ ಅವರಿಗೆ ಹೃತ್ಪೂರ್ವಕ ಕೃತಜ್ಞತೆಗಳು. ಪ್ರಕಟಣಾ ಸಮಿತಿಯ ಮುಖ್ಯಸ್ಥರಾಗಿ ಅವರು ಪ್ರತಿ ತಿಂಗಳೂ ಒಂದು ಅಂಕಣವನ್ನು ಸ್ಕೌಟ್-ಗೈಡ್ ಪತ್ರಿಕೆಗೆ ಬರೆಯಬೇಕೆಂದು ನಾನು ಈಗಾಗಲೇ ಕೋರಿದ್ದು ಅದು ನಿರಂತರವಾಗಿ ಮುಂದುವರೆಯಬೇಕೆಂಬ ತಮ್ಮಗಳ ಹೃದಯಾಂತರಾಳದ ಅನಿಸಿಕೆಯನ್ನು ಅವರಿಗೆ ತಲುಪಿಸಲು ಹೆಮ್ಮೆಪಡುತ್ತೇನೆ.

ರಾಜ್ಯ ಹಾಗು ರಾಷ್ಟ್ರದ ಸ್ಕೌಟ್-ಚಳವಳಿಯ ಶತಮಾನದ ಇತಿಹಾಸದಲ್ಲಿ ಈ ಹಿಂದೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಂಸ್ಥೆಗಳಿಂದ ವಾರ್ಷಿಕವಾಗಿ ಪ್ರತಿ ಗ್ರಾಮ ಪಂಚಾಯುತ್‌ನಿಂದ ರೂ.2000/- ತಾಲ್ಲೂಕ್ ಪಂಚಾಯತ್‌ನಿಂದ ರೂ.5000/- ಹಾಗು ಪ್ರತಿ ಜಿಲ್ಲಾ ಪಂಚಾಯತ್‌ಗಳಿಂದ ರೂ.25000/-ಗಳನ್ನು ಸ್ಕೌಟ್-ಗೈಡ್ ಚಟುವಟಿಕೆಗಳಿಗೆ, ರ‍್ಯಾಲಿಗಳಿಗೆ - ಸಮವಸ್ತ್ರ ನೀಡಲು ನೀಡಬೇಕೆಂಬ ಸರ್ಕಾರದ ಆದೇಶ ಇದುವರೆವಿಗೆ ಇರಲಿಲ್ಲ. ಆದರೆ ಹೋದವರ್ಷ ಸಂಸ್ಥೆಯು ನೀಡಿದ ಮನವಿಯನ್ನು ಪುರಸ್ಕರಿಸಿ ರಾಜ್ಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯು ನೀಡಿದ ಸುತ್ತೋಲೆಯಂತೆ ರಾಜ್ಯದ ಎಲ್ಲಾ ಸ್ಥಳೀಯ ಹಾಗು ಜಿಲ್ಲಾ ಸಂಸ್ಥೆಗಳು ಒಟ್ಟು ರೂ. 60 ಲಕ್ಷಗಳಿಗೂ ಹೆಚ್ಚು ಹಣವನ್ನು ರಾಜ್ಯದ ಪಂಚಾಯತ್‌ರಾಜ್ ಸಂಸ್ಥೆಗಳಿಂದ ಪಡೆದಿರುವುದಕ್ಕೆ ನಾನು ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳಿಗೆ, ಜಿಲ್ಲೆಯ ಎಲ್ಲಾ ಸಂಘಟಕರುಗಳಿಗೆ ಹಾಗು ಈ ಹಣವನ್ನು ಚಳವಳಿಯ ಬೆಳವಣಿಗೆಗೆ ಪಡೆಯುವಲ್ಲಿ ಸೂಕ್ತ ಸಹಾಯ - ಸಹಕಾರ ಮಾರ್ಗದರ್ಶನವನ್ನು ಸುತ್ತೋಲೆಗಳ ಮೂಲಕ ನೀಡಿದ ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯುತ್‌ಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ತಾಲ್ಲೂಕು ಪಂಚಾಯತ್‌ಗಳ ಮುಖ್ಯಾಧಿಕಾರಿಗಳಿಗೆ, ಗ್ರಾಮ ಪಂಚಾಯತ್‌ಗಳ ಅಭಿವೃದ್ಧಿ ಅಧಿಕಾರಿಗಳಿಗೆ, ಕಾರ್ಯದರ್ಶಿಗಳಿಗೆ ಹಾಗು ಮೂರೂ ವಿಭಾಗಗಳ ಪಂಚಾಯತ್ ಸಂಸ್ಥೆಗಳ ಅಧ್ಯಕ್ಷರುಗಳು, ಉಪಾಧ್ಯಕ್ಷರುಗಳು ಹಾಗು ಸದಸ್ಯರುಗಳಿಗೆ, ಸ್ಥಳೀಯ ಸಂಸ್ಥೆಗಳು ಹಾಗು ಜಿಲ್ಲಾ ಸಂಸ್ಥೆಗಳು ಮತ್ತು ರಾಜ್ಯ ಸಂಸ್ಥೆಯ ಪರವಾಗಿ ಹೃತ್ಪೂರ್ವಕ ಧನ್ಯವಾದವನ್ನು ಅರ್ಪಿಸುತ್ತೇನೆ.

ಇದೆಲ್ಲ ಸಾಧ್ಯವಾದದ್ದು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು ಹಾಗು ಇಲಾಖೆಯ ಕಾರ್ಯದರ್ಶಿಗಳಾದ ಶ್ರೀಮತಿ ಶಾಲಿನಿ ರಜನೀಶ್, ಭಾ.ಆ.ಸೇ., ಹಾಗು ಪಂಚಾಯತ್‌ರಾಜ್ ವಿಭಾಗದ ನಿರ್ದೇಶಕರಾದ ಶ್ರೀ ಪಿ.ಕುಮಾರ್ ಮತ್ತು ಇಲಾಖೆಯ ಇತರೆ ಅಧಿಕಾರಿಗಳ ಸಹಾಯ ಹಾಗು ಸಹಕಾರದಿಂದ. ಇವರೆಲ್ಲರಿಗೂ ಸ್ಕೌಟ್-ಗೈಡ್ ಚಳವಳಿಯ ಪರವಾಗಿ ಚಿರಋಣಿಯಾಗಿದ್ದೇವೆ.

## ಮುಖ್ಯ ಆಯುಕ್ತರ ನುಡಿ......

2012-13ನೇ ಸಾಲಿನಲ್ಲಿಯೂ ಕೂಡ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಗೆ ನಾವು ಮನವಿ ಸಲ್ಲಿಸಿ, ಈ ಹಿಂದೆ ಇಲಾಖೆಯು ರಾಜ್ಯದ ಎಲ್ಲಾ ಗ್ರಾಮಪಂಚಾಯತ್‌ಗಳಿಗೆ, ತಾಲ್ಲೂಕು ಪಂಚಾಯತ್ ಗಳಿಗೆ/ಜಿಲ್ಲಾ ಪಂಚಾಯತ್‌ಗಳಿಗೆ ನೀಡಿದ ಆದೇಶದ ಪ್ರಕಾರ 2012-13ನೇ ವಾರ್ಷಿಕ ಆಯ-ವ್ಯಯದಲ್ಲಿ ಸ್ಕೌಟ್-ಗೈಡ್ ಚಳವಳಿಯ ಸಮಗ್ರ ಬೆಳವಣಿಗೆಗೆ ವಂತಿಕೆಯಾಗಿ ಗ್ರಾಮ ಪಂಚಾಯತ್‌ಗಳಿಂದ ರೂ. 2000/- ತಾಲ್ಲೂಕ್ ಪಂಚಾಯತ್‌ಗಳಿಂದ ರೂ. 5,000/- ಮತ್ತು ಜಿಲ್ಲಾ ಪಂಚಾಯತ್‌ಗಳಿಂದ ರೂ. 25,000/- ಗಳನ್ನು ನೀಡಲು ಆದೇಶಿಸಬೇಕೆಂದು ಕೋರಿದ್ದೇವೆ. ಸೂಕ್ತ ಆದೇಶದ ನಿರೀಕ್ಷೆಯಲ್ಲಿದ್ದೇವೆ.

ಇತ್ತೀಚೆಗೆ ರಾಜ್ಯ ಸ್ಕೌಟ್ ಮತ್ತು ಗೈಡ್ ವಿಭಾಗಗಳಿಂದ ಡಾ. ಆನಿಬೆಸೆಂಟ್ ತರಬೇತಿಕೇಂದ್ರ ಹಾಗೂ ಕೊಂಡಜ್ಜಿ ತರಬೇತಿಕೇಂದ್ರಗಳಲ್ಲಿ ಜರುಗಿದ ಹಲವಾರು ರಾಜ್ಯಮಟ್ಟದ ತರಬೇತಿ ಕಾರ್ಯಕ್ರಮಗಳಲ್ಲಿ ನಾವು ನಿರೀಕ್ಷಿಸಿದಂತೆ ಸಂಖ್ಯೆ ಇರದಿರುವುದು ನನ್ನ ಗಮನಕ್ಕೆ ಬಂದಿದೆ. ಆದುದರಿಂದ ನಾನು ಈ ಮೂಲಕ ರಾಜ್ಯದ ಎಲ್ಲಾ ಜಿಲ್ಲೆಗಳ ಜಿಲ್ಲಾ ಮುಖ್ಯ ಆಯುಕ್ತರುಗಳನ್ನು, ಜಿಲ್ಲಾ ಆಯುಕ್ತರುಗಳನ್ನು, ತರಬೇತಿ ಆಯುಕ್ತರುಗಳನ್ನು ಹಾಗೂ ಜಿಲ್ಲಾ ಕಾರ್ಯದರ್ಶಿಗಳು ಮತ್ತು ಜಿಲ್ಲೆಗಳ ಸಂಘಟನೆಗಳ ಜವಾಬ್ದಾರಿ ಹೊತ್ತಿರುವ ಎ.ಎಸ್.ಓ.ಸಿ./ಡಿ.ಓ.ಸಿ./ ಡಿ.ಓ.ಗಳ ಗಮನಕ್ಕೆ ತರುವುದೇನೆಂದರೆ, ರಾಜ್ಯ ಸಂಸ್ಥೆಯು ಏರ್ಪಡಿಸುವ ಎಲ್ಲಾ ತರಬೇತಿ ಕಾರ್ಯಕ್ರಮಗಳಿಗೆ ಪ್ರತಿ ಜಿಲ್ಲೆಗಳಿಂದ ಒಬ್ಬರು/ಇಬ್ಬರು ಅಭ್ಯರ್ಥಿಗಳನ್ನು ಕಳುಹಿಸಲೇಬೇಕೆಂದು ಕೋರುತ್ತೇನೆ. ದಯಮಾಡಿ ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಯ ಮಟ್ಟದಲ್ಲಿ ಈ ಬಗ್ಗೆ ವಿವರವಾಗಿ ಚರ್ಚಿಸಿ ರಾಜ್ಯ ಸಂಸ್ಥೆಯು 2012-13ನೇ ವಾರ್ಷಿಕದಲ್ಲಿ ಜರುಗಿಸಲು ಯೋಜಿಸಿರುವ ಎಲ್ಲಾ ತರಬೇತಿ ಹಾಗು ಚಟುವಟಿಕೆಗಳಿಗೆ ನಿಮ್ಮ ಜಿಲ್ಲೆಗಳಿಗೆ ನೀಡಿರುವ ಸಂಖ್ಯೆಗನುಗುಣವಾಗಿ ಕಳುಹಿಸಲೇಬೇಕೆಂದು ಸೂಚಿಸಬಯಸುತ್ತೇನೆ. ಈ ವಿಚಾರದಲ್ಲಿ ನಿಮಗೆ ಯಾವುದಾದರೂ ಅಡೆ-ತಡೆಗಳಲ್ಲಿದ್ದಲ್ಲಿ ರಾಜ್ಯ ಸಂಸ್ಥೆಯ ಗಮನಕ್ಕೆ ತರಬೇಕೆಂದು ಸೂಚಿಸುತ್ತೇನೆ.

ಮೂರು-ನಾಲ್ಕು ಜಿಲ್ಲೆ ಬಿಟ್ಟು ಬೇರೆಲ್ಲ ಜಿಲ್ಲೆಗಳಲ್ಲಿ ಜಿಲ್ಲಾ ಸಂಸ್ಥೆಯ ವಾರ್ಷಿಕ ಸಭೆ ಹಾಗೂ ರಾಷ್ಟ್ರೀಯ ಸಂಸ್ಥೆಯು ಸೂಚಿಸಿದಂತೆ ಜಿಲ್ಲಾ ಮುಖ್ಯ ಆಯುಕ್ತರ ಆಯ್ಕೆಯ ಪ್ರಕ್ರಿಯೆ ಆಗಿರುವ ಬಗ್ಗೆ ರಾಜ್ಯ ಸಂಸ್ಥೆಗೆ ವರದಿಗಳು ಬಂದಿರುತ್ತದೆ. ಯಾವ ಜಿಲ್ಲೆಗಳು ಇದುವರೆವಿಗೆ ವಾರ್ಷಿಕ ಸಭೆಯನ್ನು ನಡೆಸಲು ಸಾಧ್ಯವಾಗಿಲ್ಲವೋ ಅವರುಗಳು ತಕ್ಷಣ ಈ ಬಗ್ಗೆ ಸೂಕ್ತ ಕಾರ್ಯಸೂಚಿಯನ್ನು ಸಿದ್ಧಪಡಿಸಿ ಆಗಸ್ಟ್ ಮೊದಲನೇ ವಾರದೊಳಗೆ ರಾಜ್ಯ ಸಂಸ್ಥೆಗೆ ವಿವರಗಳನ್ನು ಸಲ್ಲಿಸಲು ಸೂಚಿಸುತ್ತೇನೆ.

ರಾಜ್ಯ ಸಂಸ್ಥೆ, ಜಿಲ್ಲಾ ಸಂಸ್ಥೆಗಳು ಹಾಗು ಸ್ಥಳೀಯ ಸಂಸ್ಥೆಗಳು ವಾರ್ಷಿಕ 2012-13 ರಲ್ಲಿ ಯೋಜಿಸಿರುವ ಎಲ್ಲಾ ಕಾರ್ಯಕ್ರಮಗಳು, ತರಬೇತಿಗಳು ಯಶಸ್ವಿಯಾಗಿ ಜರುಗುವಲ್ಲಿ ದಯಾಮಯನಾದ ಭಗವಂತನ ಸದಾಶಯ ನಮ್ಮಗಳ ಮೇಲಿರಲಿ ಎಂದು ಪ್ರಾರ್ಥಿಸುತ್ತೇನೆ.

ತಮ್ಮ ವಿಶ್ವಾಸಿ

(signature)

ಕೊಂಡಜ್ಜಿ ಬಿ. ಷಣ್ಮುಖಪ್ಪ

# ಆಕಾಶದ ಆಟ ಗಾಳಿಪಟ

ಸಾಮಾನ್ಯವಾಗಿ ಮಕ್ಕಳಿಂದ ಮುದುಕರವರೆಗೆ ಪರಿಚಯವಿರುವ ಒಂದು ಮನರಂಜನೆಯ ಆಟ ಗಾಳಿಪಟದ ಹಾರಾಟ. ಈ ಗಾಳಿಪಟದ ಆಟಕ್ಕೆ ಸುಮಾರು 2800 ವರ್ಷಗಳ ಇತಿಹಾಸವಿದೆ ಎಂದು ಹೇಳಲಾಗಿದೆ. **ಗಾಳಿಪಟವನ್ನು ಮೊದಲು ಕಂಡುಹಿಡಿದವರು ಚೈನಾದ ಮೋಜಿ ಮತ್ತು ಲುಬಿನ್ ಎಂಬುವರು. ಅದನ್ನು ಭಾರತಕ್ಕೆ ತಂದವರು ಚೈನಾದ ಪ್ರವಾಸಿಗ ಹ್ಯುಯೆನ್‌ತ್ಸಾಂಗ್**. ಗ್ರೀಕ್ ಸಾಹಿತ್ಯದ ಪ್ರಕಾರ, ಭಾರತವೂ ಸೇರಿದಂತೆ ಏಷ್ಯಾದ ಕೆಲವು ದೇಶಗಳಿಗೆ ಈ ಗಾಳಿಪಟ ಬಂದು 1600 ವರ್ಷಗಳಾಗಿದೆಯಂತೆ

ಗಾಳಿಪಟದ ಆಟ ಒಂದು ಕುತೂಹಲದ ಮತ್ತು ಖುಷಿ ತಂದುಕೊಡುವ ಆಟ. ಗಾಳಿಪಟವನ್ನು ನಿರ್ಮಿಸಲು ಯವುದೇ ಭಾರಿ ಬಂಡವಾಳ ಬೇಕಾಗಿಲ್ಲ. ಒಂದಿಷ್ಟು ಕಾಗದ, ದಾರ, ಬಿದಿರ ಕಡ್ಡಿ, ಇಷ್ಟಿದ್ದರೆ ಸಾಕು. ಇದಕ್ಕೆ ಆಟದ ಮೈದಾನವೂ ಬೇಕಾಗಿಲ್ಲ. ಆಕಾಶದ ಬಯಲೇ ಇದಕ್ಕೆ ಆಟದ ಮೈದಾನ. ಈ ಆಟಕ್ಕೆ ಯಾವುದೇ ಜಾತಿ, ಮತ, ವರ್ಣ, ವರ್ಗ, ಧರ್ಮ, ದೇಶ, ಭಾಷೆ – ಇತ್ಯಾದಿ ಯಾವ ಬೇಧವೂ ಇಲ್ಲ. ಇದು ಸರ್ವಜನಾಂಗದ ಸಾಮಾನ್ಯ ಆಟ.

ಬಣ್ಣ ಬಣ್ಣದ ಗಾಳಿಪಟಗಳು ಆಕಾಶದಲ್ಲಿ ಹಾರಾಡುವುದನ್ನು ನೋಡುವುದೇ ಕಣ್ಣಿಗೆ ಹಬ್ಬ. ಮಾನವರು ತಮ್ಮ ಪ್ರಾರ್ಥನೆಯನ್ನು ಗಾಳಿಪಟದ ಮೂಲಕ ದೇವರಿಗೆ ಮುಟ್ಟಿಸುವ ಸಂಕೇತವೆಂದು ಹಿಂದಿನವರು ಹೇಳುತ್ತಾರೆ. ಗಾಳಿಗೆ ಎದುರಾಗಿ ಪಟ ಹಾರಿಬಿಡುವುದು ಜೀವನದಲ್ಲಿ ಕಷ್ಟಗಳು ಎದುರಾದರೂ ಹೆದರದೆ, ವಿಶ್ವಾಸ ತುಂಬಿಕೊಂಡು ಮುನ್ನಡೆಯಬೇಕು ಎಂಬುದರ ಸಂಕೇತವೂ ಆಗಿದೆ. ಹಿಂದಿನ ಕಾಲದಲ್ಲಿ ರಾಜರು–ನವಾಬರು ಮೋಜಿಗಾಗಿ ಏರ್ಪಡಿಸುತ್ತಿದ್ದ ಗಾಳಿಪಟದಾಟ ಈಗ ಜನಸಾಮಾನ್ಯರ ಹಬ್ಬವೇ ಆತಬಿಟ್ಟಿದೆ.

ಸಾಮಾನ್ಯವಾಗಿ ಗಾಳಿಪಟದ ಹಾರಾಟ ನಡೆಯುವುದು ಚಳಿಗಾಲದ ಕೊನೆಯ ಭಾಗದಲ್ಲಿ; ಸಂಕ್ರಾಂತಿ ಹಬ್ಬದ ಸಂದರ್ಭದಲ್ಲಿ. ಆಗ ಆಕಾಶ ಶುಭ್ರವಾಗಿರುತ್ತದೆ. ಆದರೂ ಗಾಳಿಪಟದಾಟಕ್ಕೆ ಯಾವುದೇ ಕಾಲದ ನಿರ್ಬಂಧವಿಲ್ಲ. ಚೆನ್ನಾಗಿ ಗಾಳಿ ಬೀಸುತ್ತಿದ್ದರೆ ಸಾಕು. ಗಾಳಿಪಟದಾಟದಲ್ಲಿ ಸ್ಪರ್ಧೆಗಳೂ ನಡೆಯುವುದುಂಟು. ಪಟಗಳ ನಿರ್ಮಾಣ ಒಂದು ಕರಕುಶಲ ಕಲೆಯೂ ಹೌದು. ಮೊದ ಮೊದಲೆಲ್ಲ ಚಚ್ಚೌಕ ಅಥವಾ ತ್ರಿಕೋನಾಕಾರದ ಪಟಗಳಿರುತ್ತಿದ್ದವು. ಈಗ ಮನುಷ್ಯ, ಪ್ರಾಣಿ, ಪಕ್ಷಿ ಇತ್ಯಾದಿ ನಾನಾ ಆಕಾರಗಳಲ್ಲಿ ಪಟಗಳನ್ನು ತಯಾರಿಸಲಾಗುತ್ತದೆ. ಕೆಲವು ಕಡೆ ಈ ಗಾಳಿಪಟಗಳ ಮೇಲೆ ಪೌರಾಣಿಕ ಕಥಾಚಿತ್ರಗಳನ್ನು ಬರೆಯುವುದೂ ಉಂಟು. ವಿವಿಧ ಬಣ್ಣಗಳ ಗಾಳಿಪಟಗಳಂತೂ ಸರ್ವಸಾಮಾನ್ಯ.

1750ರಲ್ಲಿ ಬೆಂಜಮಿನ್ ಫ್ರಾಂಕ್ಲಿನ್ ಎಂಬಾತ ಬಿರುಗಾಳಿಯಲ್ಲಿ ಗಾಳಿಪಟ ಹಾರಿಸುವ ಒಂದು ಪ್ರಯೋಗ ನಡೆಸಿದ. 1752ರಲ್ಲಿ ಥಾಮಸ್ ಫ್ರಾಂಕೋಯಿಸ್ ಎಂಬಾತ ಒಂದು ಪ್ರಯೋಗ ನಡೆಸಿ, ಮೋಡಗಳಲ್ಲಿ ಮಿಂಚಿನ ಕಣ ಕಂಡುಕೊಂಡನೆಂದು ಹೇಳಲಾಗಿದೆ. 1800 ರಲ್ಲಿ ಅದೇ ಮೊದಲ ವಿಮಾನ ನಿರ್ಮಿಸಿದ ರೈಟ್ ಸಹೋದರರಿಗೆ ಗಾಳಿಪಟವೇ ಸೂತ್ರಾಧಾರವಾಯಿತು. ಈಗಂತೂ ಹವಾಮಾನ, ವಿಮಾನಯಾನ, ದೂರಸಂಪರ್ಕ, ಆಕಾಶವಾಣಿ, ಛಾಯಾಗ್ರಹಣ ಇತ್ಯಾದಿ ಆಧುನಿಕ ವೈಜ್ಞಾನಿಕ ಉದ್ದೇಶಗಳಿಗೂ ಗಾಳಿಪಟದ ತಂತ್ರ ಬಳಕೆಯಾಗುತ್ತಿದೆ.

ಎರಡನೆಯ ಮಹಾಯುದ್ಧದಲ್ಲಿ ಸೈನಿಕರಿಗೆ ಸೂಚನೆ ನೀಡಲು ಗಾಳಿಪಟಗಳನ್ನು ಬಳಸಿಕೊಳ್ಳಲಾಗಿದೆ. ಕ್ರಿ.ಪೂ. 906 ರಷ್ಟು ಹಿಂದೆಯೇ ರಷ್ಯಾದ ಸೌಗೋಡಿನ ಪ್ರಿನ್ಸ್ ಒಲೆಕ್ ಎಂಬಾತ ಕಾನ್‌ಸ್ಟಾಂಟಿನೋಪಲ್ ಮೇಲಿನ ಆಕ್ರಮಣಕ್ಕಾಗಿ ಕಾಗದದಲ್ಲಿ ಮಾಡಿದ ಕುದುರೆ, ಮನುಷ್ಯರ ರೂಪದ ಗಾಳಿಪಟಗಳನ್ನು ಹಾರಿಸಿದಾಗ, ಅವನ್ನು ಕಂಡು ಗ್ರೀಕರು ಹೆದರಿದರಂತೆ. ಕ್ರಿ.ಶ. 1392ರಲ್ಲಿ ಕೊರಿಯಾದ ಅಡ್ಮಿರಲ್ ಇ ಎನ್ನುವವನು ತನ್ನ ಸೈನ್ಯಕ್ಕೆ ಗಾಳಿಪಟದ ಮೂಲಕವೇ ದಿಕ್ಕು ತೋರಿಸಿ, ಕೊರಿಯನ್ನರಿಗೆ ಜಯ ತಂದುಕೊಟ್ಟ ಎನ್ನಲಾಗಿದೆ.

ವಾಸ್ತವವಾಗಿ ಈಗಿನ ಪ್ಯಾರಾಚೂಟ್, ಬೆಲೂನ್, ಗ್ಲೈಡರ್ ಇತ್ಯಾದಿಗಳೆಲ್ಲ ಗಾಳಿಪಟದ ಹೊಸರೂಪಗಳೇ. ಇಲ್ಲಿಗೆ ನಾಲ್ಕು ವರ್ಷಗಳ ಹಿಂದೆ ಜರ್ಮನಿ ಕಂಪನಿಯೊಂದು ಗಾಳಿಪಟದಿಂದ ಹಡಗನ್ನು ಎಳೆಸುವ ಪ್ರಯೋಗ ನಡೆಸಿದೆ. ಇದರಿಂದ ಹಡಗಿನ ಇಂಧನದಲ್ಲಿ ಶೇ 30 ಭಾಗ ಉಳಿತಾಯವಾಗುತ್ತದೆಂದು ಹೇಳಲಾಗಿದೆ. ಈಗಂತೂ ಗಾಳಿಯ ವೇಗದಿಂದ ವಿದ್ಯುತ್ ಉತ್ಪಾದಿಸುವ ಕೆಲಸ ನಡದೇ ಇದೆ.

ಆಧುನಿಕ ತಂತ್ರಜ್ಞಾನ ಬಂದ ಮೇಲೆ ಗಾಳಿಪಟ ಹಾರಿಸುವುದು ಒಂದು ಸಾಂಸ್ಕೃತಿಕ ಹಬ್ಬವಾಗಿದೆ. ಭಾರತ, ಆಫ್‌ಘಾನಿಸ್ಥಾನ, ಪಾಕಿಸ್ತಾನ, ವಿಯಾಟ್‌ನಾಂ, ಮಲೇಷಿಯಾ, ಬರ್ಮುಡಾ, ದಕ್ಷಿಣ ಅಮೇರಿಕಾ, ಕೊಲಂಬಿಯಾ, ಗಯಾನ, ಯೂರೋಪ್ ರಾಷ್ಟ್ರಗಳು ಇಲ್ಲೆಲ್ಲಾ ಗಾಳಿಪಟದಾಟ ರೂಢಿಯಲ್ಲಿದೆ. ಚೈನಾದ ವೇಷಂಗ್-ಶಾಂಡೋಲ್ ನಗರವನ್ನು 'ವಿಶ್ವ ಗಾಳಿಪಟದ ರಾಜಧಾನಿ' ಎಂದೇ ಕರೆಯಲಾಗಿದೆ. ಅಲ್ಲಿ ಜಗತ್ತಿನಲ್ಲೇ ಬೃಹತ್ತಾದ ಗಾಳಿಪಟದ ಮ್ಯೂಸಿಯಂ ಇದೆ.

ನಮ್ಮ ಸ್ಕೌಟ್ ಮತ್ತು ಗೈಡ್ ಮಕ್ಕಳಿಗಂತೂ ಗಾಳಿಪಟದಾಟ ತುಂಬ ಖುಷಿ ತಂದುಕೊಡುತ್ತದೆ. ಅದರಿಂದ ಮನರಂಜನೆಯ ಜೊತೆಗೆ ಸ್ಪರ್ಧಾಮನೋಭಾವ ಬೆಳೆಯಲು ಅವಕಾಶವಾಗುತ್ತದೆ. ಶಾಲೆಯ ಉಳಿದ ಆಟ- ಪಾಠಗಳಂತೆ ಗಾಳಿಪಟದಾಟವೂ ಒಂದು ಭಾಗವಾಗಬೇಕು. ಇದು ಬಯಲಿನ ಆಟವಾದ್ದರಿಂದ ಮಕ್ಕಳಿಗೆ ತುಂಬ ಇಷ್ಟವಾಗುತ್ತದೆ. ಮಕ್ಕಳು ಬಯಲಿನಲ್ಲಿ ಮುಕ್ತವಾಗಿ ಆಡಲು ಅವಕಾಶಕೊಟ್ಟರೆ, ಅವರ ಪ್ರತಿಭೆ ಮತ್ತು ಸಾಮರ್ಥ್ಯಗಳ ವಿಕಾಸಕ್ಕೆ ಪೂರಕವಾಗುತ್ತದೆ.

ಶಾಲೆಗಳಲ್ಲಿ ಶಿಕ್ಷಕರು ಮಕ್ಕಳಲ್ಲಿ ಗಾಳಿಪಟದಾಟದ ಅಭಿರುಚಿಯನ್ನು ಬೆಳೆಸಬೇಕು. ಮಕ್ಕಳು ಗಾಳಿಪಟ ಹಾರಿಸಿ ನಲಿಯುವುದನ್ನು ಕಂಡಾಗ ಹೆತ್ತವರಿಗೂ ಸಂತೋಷವಾಗುತ್ತದೆ. ಆಗಿಂದಾಗ ಮಕ್ಕಳು ಮತ್ತು ಶಿಕ್ಷಕರಿಗಾಗಿ ನಡೆಯುವ ಸ್ಕೌಟ್ ಮತ್ತು ಗೈಡ್ ಶಿಬಿರಗಳಲ್ಲೂ ಈ ಗಾಳಿಪಟದಾಟ ನಡೆಯುವಂತಾಗಬೇಕು.

ಗಾಳಿಪಟ ಗಾಳಿಯಲ್ಲಿ ಮೇಲೇರಿದಂತೆ, ಮಕ್ಕಳೂ ತಮ್ಮ ಬದುಕಿನಲ್ಲಿ ಉನ್ನತ ಸ್ಥಾನಮಾನ ಗಳಿಸುವಂತಾಗಬೇಕು!

**ಗೊ.ರು. ಚನ್ನಬಸಪ್ಪ**
ಅಧ್ಯಕ್ಷ
ಪ್ರಕಟಣ ಸಮಿತಿ

ಅಧ್ಯಕ್ಷರ ನುಡಿ......

## State Level Youth Meet :

A State Level Youth Meet was held at Bellary under the Joint auspicious of Bellary District Association & Karnataka State Association from 27th to 30the June 2012. Youth from Four different Organisations, Namely: Bharat Scouts & Guides, Bharat Sevadal, NCC & NSS took part in the meet. They were all together about 200 of them.

The meet was formally inaugurated by Sri G. Somashekar Reddy, Hon'ble MLA of Bellary on 27th June 2012 Sri Vinod Kumar, Chairman, Bellary Urban Development Authority unvicled the Theme of the Meet "Aap bada Desh Ko Badao". Sri Divakar , Corporator Bellary, Sri R. Pandu, President, Bellary D.A. Dr. B.K.Sundar, Sri R. Venkanna DCC and other Bellary District Officials were present. Sri G. Somashekar Reddy expressed his full support to the Movement.

The programme & Activities of the meet were carried out in the scout method starting with B.P. Six. Flag and ending with campfire. The Youth were divided into different Groups. Activities like, Group Discussion, Lectures Community Service were conducted. Issues like, Eradication of corruption, Woman Empowerment, Eradication of illiteracy Dress Code, were given for group discussion in which the Youth Participated actively Prof. B. Sheshadri, gave a lecture on Youth & Society, which was very lively. Eminent persons talked on Ethics and Valued, Sri Ravindar Bandivad, Principal, Govt. Trg. Institute, spoke on Employment & Self Employment.

The Youths went on a Route March in the streets of Bellary. The highlight of the Meet was the quiz programme. Four Groups were selected through written test and quiz was conducted in different catagaries like oral, audiovisual and video.

Valedictory Function was held on 29-06-2012 Smt. M.G. Uma. District session Judge, give the valedictory speech. Sri Hosamani Siddappa, Principal, Civil Judge was also present on the occasion.

All Faith Prayer was held in the morning on 30-06-2012, Local Sight seeing was organized free of cost by District Association for all the Participants.

Sri A.V. Rajesh, RSL. Malnad Open Group, Shimoga, was the Leader of the Meet, able guided by Seniors like Sri N. Srinivasan, Headquarters Commissioner (Publication), Sri Chinna Swamy Reddy. Hon. State Training Commissioner (S), Smt. P. Saroja, ASC (G), Smt. S.K. Prabha. Headquarters Commissioner (G), Sri T.A. Manjunathacha, SOC(S), Sri R. Venkanna, DCC of Bellary & Sri Veeresh. DC(S), Sri Vijaya Simha, District Secretary & Other District Officials, Local Philonthropist put their efforts for the success of the meet.

---

**Try and leave this World a little better than you found it...**
**Stick to your Scout Promise always**
**even after you have ceased to be a boy**
**and God help you to do it.**
**– Robert Baden Powell**

---

# Gone Home



We the members of the Bharat Scouts & Guides, Karnataka State, record with Deep Regret the SAD, SUDDEN & UNTIMELY demise of Sri B.G. Varambally, LT(S), Headquarters Commissioner (Scouts) Bharat Scouts & Guides, Udupi District Association on 17th July 2012 at Udupi. It is indeed a Great Loss to the Scout / Guide Movement of Karnataka.

He served the Scout/Guide Movement with Dedication & Commitment in different capacities for the last Four Decades, both in the undivided Dakshina Kannada District - Mangalore and later in Udupi District Association since its inception.

He was one of our senior Training Team Members and served as a Member of the State Council & represented Karnataka State as a Member of the National Council, Bharat Scouts & Guides, New Delhi.

He was the first Secretary of the Udupi District Association and repsonsible for organizing number of activites of the District Association and the State by his active involvement. He was also very closely Associated with the Rotary International Movement and served as Secretary & President of Rotary Club - Kadiyali. He worked as Assistant Master and retired as Head Master of U. Kamala Bai High School, Kadiyali, Udupi. He is survived by his Wife, Two Sons, Daughter, Grand Children, relatives and well-wishers. He was aged 69 years.

We pray God Almighty to give necessary Courage and Strength to the Members of the Bereaved family to bear this irreparable Loss.

MAY HIS SOUL REST IN PEACE.

- State Secretary

## ಹಾಸನ

ದಿನಾಂಕ : 09-07-2012 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಾಸನ ಜಿಲ್ಲಾ ಸಂಸ್ಥೆಯ ವತಿಯಿಂದ ಹಾಸನ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಮುದಾಯ ಭವನದಲ್ಲಿ ಜಿಲ್ಲಾ ಮಟ್ಟದ ಸ್ಕೌಟರ್ಸ್ - ಗೈಡರ್ಸ್ ಸಮಾವೇಶವನ್ನು ಏರ್ಪಡಿಸಲಾಗಿತ್ತು.

ಕು॥ ಪ್ರೇಮಾ ಮಂಗಳೂರು ಎಲ್.ಟಿ. (ಗೈಡ್), ಧಾರವಾಡ ರವರು ದೀಪ ಬೆಳಗಿಸುವುದರ ಮೂಲಕ ಉದ್ಘಾಟಿಸಿ ಸಮಾವೇಶಕ್ಕೆ ಚಾಲನೇ ನೀಡಿದರು. ಅವರು ಮಾತನಾಡುತ್ತಾ ಪ್ರತಿಯೋರ್ವ ಸ್ಕೌಟರ್ಸ್ -ಗೈಡರ್ಸ್‌ಗಳು ತಮ್ಮ ತಮ್ಮ ಶಾಲೆಗಳಲ್ಲಿ ಸ್ವಯಂ ಪ್ರೇರಣಿಯಿಂದ ಸ್ಕೌಟ್ಸ್-ಗೈಡ್ಸ್ ತಂಡಗಳನ್ನು ಪ್ರಾರಂಭಿಸಿ ಮಕ್ಕಳಲ್ಲಿ ದೇಶಪ್ರೇಮ ರಾಷ್ಟ್ರೀಯ ಭಾವೈಕ್ಯತೆ, ಆತ್ಮಸ್ಥೈರ್ಯ, ನಾಯಕತ್ವ ಮುಂತಾದ ಗುಣಗಳನ್ನು ಬೆಳೆಸಲು ಶ್ರಮಿಸಬೇಕೆಂದು ನುಡಿದರು. ಸಮಾವೇಶದಲ್ಲಿ ಶ್ರೀ ಪ್ರಕಾಶ್ ಎಸ್. ಯಾಜಿ, ಜಿಲ್ಲಾ ಆಯುಕ್ತರು (ಸ್ಕೌಟ್) ಮತ್ತು ಇತರ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

ಶ್ರೀಯುತ ಪ್ರಕಾಶ್ ಎಸ್. ಯಾಜಿ ಜಿಲ್ಲಾ ಆಯುಕ್ತರು ಸ್ಕೌಟ್ ಸಮಾವೇಶದ ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಹೆಚ್.ಎಸ್. ಪ್ರಕಾಶ್, ಮಾನ್ಯ ಶಾಸಕರು ಹಾಸನ. ಇವರು ಆಗಮಿಸಿ ಮಾತನಾಡುತ್ತಾ, ಸ್ಕೌಟ್ ಶಿಕ್ಷಕರು ಗೈಡ್ ಶಿಕ್ಷಕಿಯರು ಸ್ವಯಂ ಪ್ರೇರಣೆಯಿಂದ ಮುಂದೆ ಬಂದು ಮಕ್ಕಳಿಗೆ ಸ್ಕೌಟ್ಸ್-ಗೈಡ್ಸ್‌ನ ಶಿಕ್ಷಣವನ್ನು ನೀಡಬೇಕೆಂದು ಹೇಳಿದರು. ಇದೇ ಸಂದರ್ಭದಲ್ಲಿ ಸ್ಕೌಟಿಂಗ್- ಗೈಡಿಂಗ್‌ನಲ್ಲಿ ಉತ್ತಮ ಸೇವೆ ಸಲ್ಲಿಸಿದ ಹಿರಿಯ ಸ್ಕೌಟ್ ಮಾಸ್ಟರ್ ಆದ ಶ್ರೀಯುತ ಸಿ.ಪಿ ಹುಚ್ಚೇಗೌಡ ಹಾಗೂ ಗೈಡರ್ ಶ್ರೀಮತಿ ಸಿ.ಎಸ್. ಗಾಯತ್ರಿದೇವಿ ರವರುಗಳಿಗೆ ಮತ್ತು ಸಣ್ಣ ಕೈಗಾರಿಕಾ ಕ್ಷೇತ್ರದಲ್ಲಿ ಉತ್ತಮ ಸಾಧನೆಗಾಗಿ ಸನ್ಮಾನ್ಯ ಮುಖ್ಯ ಮಂತ್ರಿಗಳಿಂದ ಪುರಸ್ಕೃತರಾದ ಜಿಲ್ಲಾ ಸಂಸ್ಥೆಯ ಸ್ಕೌಟ್ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿರವರಿಗೆ ಮಾನ್ಯ ಶಾಸಕರಾದ ಶ್ರೀ ಹೆಚ್.ಎಸ್. ಪ್ರಕಾಶ್ ರವರು ಅಭಿನಂದಿಸಿ ಸನ್ಮಾನಿಸಿದರು. ಸನ್ಮಾನ ಸ್ವೀಕರಿಸಿ ಮಾತನಾಡಿದ ಶ್ರೀಯುತ ಸಿ.ಪಿ. ಹುಚ್ಚೇಗೌಡರವರು ಸ್ಕೌಟಿಂಗ್‌ನಲ್ಲಿ 32 ವರ್ಷಗಳು ಸೇವೆ ಸಲ್ಲಿಸಿದ ತಮ್ಮ ಸ್ಕೌಟಿಂಗ್‌ನ ಅನುಭವಗಳನ್ನು ಹಂಚಿಕೊಂಡು, ಇತರರು ಕೂಡಾ ಸಂಸ್ಥೆಯ ಅಭಿವೃದ್ಧಿಗೆ ಶ್ರಮಿಸುವಂತೆ ತಮ್ಮ ಸಹಪಾಠಿಗಳಿಗೆ ತಿಳಿಸಿದರು. ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀಯುತ ಸುರೇಶ್ ಗುರೂಜಿರವರು ಸಹಾ ಉಪಸ್ಥಿತರಿದ್ದು ಸರ್ವರಿಗೂ ಶುಭ ಹಾರೈಸಿದರು.

ಶ್ರೀಯುತ ಪ್ರಕಾಶ್ ಎಸ್. ಯಾಜಿ ಜಿಲ್ಲಾ ಆಯುಕ್ತರು (ಸ್ಕೌಟ್) ತಮ್ಮ ಅಧ್ಯಕ್ಷೀಯ ನುಡಿಗಳಲ್ಲಿ ಮಾತನಾಡುತ್ತಾ ಸ್ಕೌಟಿಂಗ್-ಗೈಡಿಂಗ್‌ನಲ್ಲಿ ತರಬೇತಿ ಪಡೆದ ಶಿಕ್ಷಕ -ಶಿಕ್ಷಕಿಯರು ತಮ್ಮ ಶಾಲೆಗಳಲ್ಲಿ ಸಕ್ರೀಯವಾಗಿ ಸ್ಕೌಟ್ಸ್-ಗೈಡ್ಸ್ ಚಟುವಟಿಕೆಗಳನ್ನು ನಡೆಸಿಕೊಂಡು ಬರುವಂತೆ ತಿಳಿಸಿದರಲ್ಲದೆ, ಶ್ರೀ ಎಲ್.ಟಿ. ಲೋಕೇಶ್‌ಎ.ಎಸ್.ಓ.ಸಿ. ಸರ್ವರನ್ನು ಸ್ವಾಗತಿಸಿದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಾಸನ ಜಿಲ್ಲಾ ಸಂಸ್ಥೆಯ ವತಿಯಿಂದ ದಿನಾಂಕ: 13-07-2012 ರಿಂದ 15-07-2012 ರ ವರೆಗೆ 3 ದಿನಗಳ ಕಾಲ ಜಿಲ್ಲಾಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ತೃತೀಯ ಸೋಪಾನ ತರಬೇತಿ ಶಿಬಿರವನ್ನು ಹಾಸನದ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಮುದಾಯ ಭವನದ ಆವರಣದಲ್ಲಿ ಏರ್ಪಡಿಸಲಾಗಿತ್ತು.

ಈ ತರಬೇತಿ ಶಿಬಿರದಲ್ಲಿ ಹಾಸನ ಜಿಲ್ಲಾದ್ಯಂತ ಶಾಲಾ ಕಾಲೇಜುಗಳಿಂದ 110 ಗೈಡ್ಸ್ ಹಾಗೂ 75 ಸ್ಕೌಟ್ಸ್ ಮತ್ತು 20 ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು.

ಜಿಲ್ಲಾ ವಾರ್ತೆ

ಜಿಲ್ಲಾ ತರಬೇತಿ ಆಯುಕ್ತರು (ಗೈಡ್ಸ್) ಆದ ಶ್ರೀಮತಿ ಕಾಂಚನಮಾಲಾರವರು ಶಿಬಿರಾರ್ಥಿಗಳಿಗೆ ಶುಭ ಹಾರೈಸುವುದರ ಮೂಲಕ ಶಿಬಿರವನ್ನು ಉದ್ಘಾಟಿಸಿ ಚಾಲನೆ ನೀಡಿದರು. ಶಿಬಿರದ ನಾಯಕರಾಗಿ ಸ್ಕೌಟ್ ವಿಭಾಗಕ್ಕೆ ಶ್ರೀಯುತ ಮುತ್ತೇಗೌಡ, ಜಿಲ್ಲಾ ಕಾರ್ಯದರ್ಶಿ ಕಾರ್ಯನಿರ್ವಹಿಸಿದರು ಮತ್ತು ಗೈಡ್ ವಿಭಾಗಕ್ಕೆ ಶ್ರೀಮತಿ ಬಿ. ಕಾಮೇಶ್ವರಿ, ಗೈಡ್ ಕ್ಯಾಪ್ಟನ್ ಗಂಡಸಿ ಪದವಿಪೂರ್ವ ಕಾಲೇಜು ಅರಸೀಕೆರೆ ತಾಲ್ಲೋಕ್ ಇವರು ನಾಯಕಿಯಾಗಿ ಕಾರ್ಯನಿರ್ವಹಿಸಿದರು.

ಶಿಬಿರದ ಸಮಾರೋಪ ಸಮಾರಂಭವು ದಿನಾಂಕ : 15-07-2012 ರಂದು ಡಾ: ವೈ.ಎಸ್. ವೀರಭದ್ರಪ್ಪ, ಜಿಲ್ಲಾ ಮುಖ್ಯ ಆಯುಕ್ತರು ಇವರ ಅಧ್ಯಕ್ಷತೆಯಲ್ಲಿ ಜರುಗಿತು. ಮುಖ್ಯ ಅತಿಥಿಗಳಾಗಿ ಲಯನ್ಸ್ ಸಂಸ್ಥೆಯ ಅಧ್ಯಕ್ಷರೂ ಹಾಗೂ ಸಹಾಯಕ ಜಿಲ್ಲಾ ಆಯುಕ್ತರು (ಗೈಡ್) ಆದ ಶ್ರೀಮತಿ ರೂಪಾ ಆನಂದ್ ರವರು ಆಗಮಿಸಿ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ತತ್ವ ನಿಯಮಗಳು ಇಂದಿನ ಮಕ್ಕಳಿಗೆ ಹಾಗೂ ನಾಗರೀಕರಣ ಆದರ್ಶವಾಗಿದ್ದು ಮಕ್ಕಳಿಗೆ ಉತ್ತಮ ಸುಸಂಸ್ಕೃತ ಜವಾಬ್ದಾರಿಯುತ ಪ್ರಜೆಗಳನ್ನಾಗಿ ಮಾಡುತ್ತಿದೆ. ಎಂದು ತಿಳಿಸಿದರು. ಸಮಾರಂಭದಲ್ಲಿ ಉಪಸ್ಥಿತರಿದ್ದ ಜಿಲ್ಲಾ ಆಯುಕ್ತರು (ಸ್ಕೌಟ್)ಆದ ಶ್ರೀ ಪ್ರಕಾಶ್ ಎಸ್. ಯಾಜಿರವರು ಮಾತನಾಡುತ್ತಾ ಇಂದಿನ ಸಮಾಜಕ್ಕೆ ಸ್ಕೌಟ್-ಗೈಡ್ ಶಿಕ್ಷಣ, ಹಾಗೂ ಪಠ್ಯೇತರ ಚಟುವಟಿಕೆಗಳು ಮಕ್ಕಳಿಗೆ ಅತ್ಯಗತ್ಯವಾಗಿ ಬೇಕಾಗಿದ್ದು, ಉತ್ತಮ ಸಮಾಜ ನಿರ್ಮಾಣ ಮಾಡುವಲ್ಲಿ ಸ್ಕೌಟ್ಸ್-ಗೈಡ್ಸ್‌ಗಳ ಪಾತ್ರ ಪ್ರಮುಖವಾದುದು ಎಂದು ತಿಳಿಸಿದರು. ಇನ್ನೋರ್ವ ಅತಿಥಿಯಾಗಿ ಆಗಮಿಸಿ ಮಾತನಾಡಿದ ಶ್ರೀಯುತ ಆನಂದ್ ರವರು ಸ್ಕೌಟ್-ಗೈಡ್ ಶಿಕ್ಷಣಗಳನ್ನು ಶಿಸ್ತು, ಸೇವಾ ಬಾವನೆ, ರಾಷ್ಟ್ರೀಯ ಭಾವೈಕ್ಯತೆ ಮೂಡಿಸುವ ನಿಟ್ಟಿನಲ್ಲಿ ಸಂಸ್ಥೆಯು ಕಾರ್ಯನಿರ್ವಹಿಸುತ್ತಿದೆ. ಎಂದು ತಿಳಿಸಿದರು. ಈ ಚಟುವಟಿಕೆಗಳನ್ನು ಎಲ್ಲಾ ಮಕ್ಕಳು ಅಳವಡಿಸಿಕೊಂಡು ಉತ್ತಮ ಜವಾಬ್ದಾರಿಯುತ ಪ್ರಜೆಯಾಗುವಂತೆ ಕರೆನೀಡಿದರು.

ಅಧ್ಯಕ್ಷತೆ ವಹಿಸಿ ಮಾತನಾಡಿದ ಜಿಲ್ಲಾ ಮುಖ್ಯ ಆಯುಕ್ತರಾದ ಡಾ ವೈ.ಎಸ್. ವೀರಭದ್ರಪ್ಪರವರು ಮಾತನಾಡಿ ಸ್ಕೌಟ್ಸ್ - ಗೈಡ್ಸ್‌ಗಳು ದಿನನಿತ್ಯ ದೇವರನ್ನು ಪೂಜಿಸುವ ಜೊತೆಗೆ ತಮ್ಮ ತಂದೆ ತಾಯಿಗಳನ್ನು ದೇವರಂತೆ ಕಾಣಬೇಕು. ಶ್ರೀ ಎಲ್.ಟಿ. ಲೋಕೇಶ್, ಸಹಾಯಕ ರಾಜ್ಯ ಸಂಘಟನಾ ಆಯುಕ್ತರು ಕಾರ್ಯಕ್ರಮ ನಿರೂಪಿಸಿ ಶ್ರೀ ಮುತ್ತೇಗೌಡ ಜಿಲ್ಲಾ ಕಾರ್ಯದರ್ಶಿ, ಸ್ವಾಗತಿಸಿದರು. ಶ್ರೀಮತಿ ಶಫೀತಾ ಬೇಗಂ ವಂದನಾರ್ಪಣೆ ಸಲ್ಲಿಸಿದರು.

## ಬೀದರ್

ದಿನಾಂಕ : 23-06-2012 ರಂದು ಮಲೇರಿಯಾ ನಿರ್ಮೂಲನಾ ದಿನಾಚರಣೆ ಅಂಗವಾಗಿ ಬಸವಕಲ್ಯಾಣ ಸರಕಾರಿ ಆಸ್ಪತ್ರೆ ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ವತಿಯಿಂದ ಹಮ್ಮಿಕೊಂಡ ಜಾಗೃತಿ ಜಾಥಕ್ಕೆ ಸರ್ಕಲ್ ಇನ್ಸ್‌ಪೆಕ್ಟರ್ ರಾದ ಶ್ರೀ ಸನದಿ, ಚಾಲನೆ ನೀಡಿದರು. ತಾಲ್ಲೂಕು ವೈದ್ಯಾಧಿಕಾರಿಗಳಾದ ಡಾ|| ಬುರಳೆ ಹಾಗು ಸಿಬ್ಬಂದಿಯವರು ಮತ್ತು ಸ್ಕೌಟ್ಸ್-ಗೈಡ್ಸ್ ಮಕ್ಕಳು ಜಾಗೃತಿ ಜಾಥಾದಲ್ಲಿ ಬಾಗವಹಿಸಿದ್ದರು. ಇದರ ನೇತೃತ್ವದಲ್ಲಿ ಶ್ರೀ ಅನಂತ ವಿ. ಭಂಡಿ ಸ್ಥಳೀಯ ಕಾರ್ಯದರ್ಶಿ ಬಸವಕಲ್ಯಾಣ ವಹಿಸಿದ್ದರು.

ದಿನಾಂಕ 5-7-2012 ರಂದು ಹುಮನಾಬಾದ್ ಸ್ಕೌಟರ್ಸ್ -ಗೈಡರ್ಸ್ ಸಮಾವೇಶವನ್ನು ನಡೆಸಲಾಯಿತು. ಇದರಲ್ಲಿ 20 ಸ್ಕೌಟರ್ಸ್ ಗೈಡರ್ಸ್ ಭಾಗವಹಿಸಿದ್ದರು. ಬಿ.ಆರ್.ಸಿ. ಕಛೇರಿಯಲ್ಲಿ ಈ ಸಮಾವೇಶವನ್ನು ನಡೆಸಲಾಯಿತು.

ದಿನಾಂಕ 10-7-2012 ರಂದು ಬಾಲ್ಕಿ ತಾಲ್ಲೂಕು ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಸತ್ಯನಿಕೇತನ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ನಡೆಸಲಾಯಿತು ಇದರ ಅಧ್ಯಕ್ಷತೆಯನ್ನು ಶ್ರೀ ಬಾಬುರಾವ ವೆಂಕೆ ತಾಲ್ಲೂಕಾ ಅನುದಾನಿತ ಪ್ರಾಥಮಿಕ ಶಾಲೆಗಳ ಅಧ್ಯಕ್ಷರು ವಹಿಸಿದ್ದರು. ಅತಿಥಿಗಳಾಗಿ ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ಬಾಜಿರಾವ ಮೇತ್ರೆ ಮತ್ತು ಎ.ಎಸ್.ಓ.ಸಿ. ಶ್ರೀ ಎ.ಎಸ್. ಶಿವಕುಮಾರ ವಹಿಸಿದ್ದರು. ಇದರಲ್ಲಿ 15 ಸ್ಕೌಟರ್ಸ್-ಗೈಡರ್ಸ್ ಭಾಗವಹಿಸಿದ್ದರು.

ದಿನಾಂಕ 23-07-2012 ರಂದು ಬೀದರ್ ಉಪನಿರ್ದೇಶಕರ ಕಛೇರಿಯಲ್ಲಿ ಚತ್ರಪತಿ ಶಿವಾಜಿ ಜಯಂತಿಯನ್ನು ಆಚರಿಸಲಾಯಿತು. ಉಪನಿರ್ದೇಶಕರಾದ ಶ್ರೀ ಹೆಚ್.ಆರ್. ಬಸಪ್ಪ ರವರು ಚತ್ರಪತಿ ಶಿವಾಜಿರವರ ಜೀವನ ಶೈಲಿಯ ಹಾಗೂ ಅವರ ದೇಶಾಭಿಮಾನದ ಬಗ್ಗೆ ವಿಸ್ತಾರವಾಗಿ ತಿಳಿ ಹೇಳಿದರು. ಇದರಲ್ಲಿ ಗುರುನಾನಕ ಪಬ್ಲಿಕ್ ಶಾಲೆಯ 8 ಸ್ಕೌಟ್ಸ್ ಮತ್ತು ಶ್ರೀ ಎ.ಎಸ್. ಶಿವುಕುಮಾರ ಎ.ಎಸ್.ಓ.ಸಿ. ಭಾಗವಹಿಸಿದ್ದರು.

## ಬಿಜಾಪುರ

ಮಕ್ಕಳಲ್ಲಿ ನೈತಿಕ, ಸ್ವಾವಲಂಬಿ ಶಿಕ್ಷಣ, ಸಾಹಸ, ಧೈರ್ಯ ಮತ್ತು ಮಾನವೀಯ ಮೌಲ್ಯಗಳೊಂದಿಗೆ ದೇಶಪ್ರೇಮ ಪರೋಪಕಾರದಂತಹ ಮೌಲ್ಯಯುತವಾದ ಶಿಕ್ಷಣ ಸ್ಕೌಟ್ಸ್-ಗೈಡ್ಸ್‌ನಲ್ಲಿ ದೊರೆಯುತ್ತಿರುವದರಿಂದ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಪಡೆದುಕೊಂಡಿರುವ ಶಿಕ್ಷಕ-ಶಿಕ್ಷಕಿಯರು ತಮ್ಮ ತಮ್ಮ ಶಾಲೆಗಳಲ್ಲಿ ಕಡ್ಡಾಯವಾಗಿ ನಡೆಸಿಕೊಂಡು ಹೋಗತಕ್ಕದ್ದು ಎಂದು ಗ್ರಾಮೀಣ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಎಂ.ವೈ. ಹೊನ್ನಕಸ್ತೂರಿ ರವರು ಸೂಚಿಸಿದರು. ದಿನಾಂಕ 28-06-2013 ರಿಂದ 29-06-2012 ರ ವರೆಗೆ ಭಾರತ್ ಸ್ಕೌಟ್ ಮತ್ತು ಗೈಡ್ಸ್, ವಿಜಾಪುರ ಗ್ರಾಮೀಣ ವಲಯದ ಸ್ಥಳೀಯ ಸಂಸ್ಥೆಯವರು ಹಮ್ಮಿಕೊಂಡಿದ್ದ ಎರಡು ದಿನಗಳ ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್ ಪುನಃಶ್ಚೇತನ ತರಬೇತಿ ಶಿಬಿರದ ಮುಕ್ತಾಯ ಸಮಾರಂಭದಲ್ಲಿ ಅತಿಥಿಯಾಗಿ ಪಾಲ್ಗೊಂಡು ಸಂಸ್ಥೆಯಿಂದ ಸನ್ಮಾನ ಸ್ವೀಕರಿಸಿ ಮಾತನಾಡುತ್ತ ಮಾರ್ಗದರ್ಶನ ಮಾಡಿದರು.

ಇದೇ ಸಂದರ್ಭದಲ್ಲಿ ವಿಜಾಪುರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಮಲ್ಲಿಕಾರ್ಜುನ ಯಂಡಿಗೇರಿ ಅವರು ಸಂಸ್ಥೆಯಿಂದ ಅಭಿನಂದನಾ ಸನ್ಮಾನ ಸ್ವೀಕರಿಸಿ ಮಾತಾಡುತ್ತ, ಶಿಸ್ತು ಮತ್ತು ಸಮಾಜ ಸೇವೆಗೆ ಮೂಲ ತಳಹದಿಯಾಗಿರುವ ಸ್ಕೌಟ್ಸ್ ಗೈಡ್ಸ್ ಜಿಲ್ಲೆಯಲ್ಲಿ ಹೆಚ್ಚು ಪರಿಣಾಮಕಾರಿಯಾಗಿ ಅನುಷ್ಠಾನಗೊಳ್ಳಬೇಕಾಗಿದ್ದು ಜಿಲ್ಲಾ ಸ್ಕೌಟ್ ಸಂಘಟನೆ ಮುಂಬರುವ 79ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಕಾಲಕ್ಕೆ ಮಹತ್ವದ ಪಾತ್ರವಹಿಸಬೇಕಾಗಿದೆ. ಎಂದು ಸಾಹಿತ್ಯ ಸಮ್ಮೇಳನಕ್ಕೆ ಸ್ಕೌಟ್ಸ್- ಗೈಡ್ಸ್ ಸೇವೆಯನ್ನು ನೀಡುವಂತೆ ಮನವಿ ಮಾಡಿದರು.

ಅತಿಥಿಯಾಗಿ ಪಾಲ್ಗೊಂಡಿದ್ದ ಜಿಲ್ಲಾ ಸಂಸ್ಥೆಯ ಪ್ರತಿನಿಧಿ ಶ್ರೀ ಶರಣು ಸಬರದ ಮಾತನಾಡಿ ಕಳೆದ ಶತಮಾನದಿಂದ ವಿಶ್ವದಾದ್ಯಂತ ಮುನ್ನಡೆದು ಬರುತ್ತಿರುವ ಸ್ಕೌಟ್-ಗೈಡ್ ಚಳುವಳಿ ನಮ್ಮ ಜಿಲ್ಲೆಯಲ್ಲಿ ಇನ್ನೂ ಹೆಚ್ಚು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಬೇಕಾಗಿದೆ ಎಂದು ನುಡಿದರು.

ಅದರಂತೆ ವಿಷಯ ಪರಿವೀಕ್ಷಕರಾದ ಶ್ರೀ ನಾಗೇಶ ಸಿನ್ನೂರ ಅವರು ಮಾತನಾಡಿ ಮಾರ್ಗದರ್ಶನ ನೀಡಿದರು. ವೇದಿಕೆಯ ಮೇಲೆ ಡಿ.ಓ.ಸಿ. ಶ್ರೀ ಸುನೀಲ ಬಿರಾದಾರ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಎಸ್. ಬೊಮ್ಮನಳ್ಳಿ ಮತ್ತು ಶಿಕ್ಷಣ ಸಂಯೋಜಕ ಶ್ರೀ ಗಡೇದ ಅವರು ಉಪಸ್ಥಿತರಿದ್ದರು. ತರಬೇತಿಯಲ್ಲಿ ತಾಲೂಕಿನ ವಿವಿಧ ಶಾಲೆಗಳಿಂದ ಒಟ್ಟು 49 ಜನ ಭಾಗವಹಿಸಿದ್ದರು.

ಪ್ರಾರಂಭದಲ್ಲಿ ಪ್ರಾಸ್ತಾವಿಕವಾಗಿ ಮಾತನಾಡಿದ ತಾಲೂಕಾ ಕಾರ್ಯದರ್ಶಿ ಶ್ರೀ ಪಿ.ಎಸ್. ಕುಂಬಾರ ಅವರು ಕಳೆದ ವರ್ಷದ ಸಂಸ್ಥೆಯ ಪ್ರಗತಿ ವರದಿ ವಾಚಿಸಿ ಈ ವರ್ಷದ ವಾರ್ಷಿಕ ಕ್ರಿಯಾ ಯೋಜನೆ ವಿವರಿಸಿದರು. ಶ್ರೀ ಜಗದೀಶ ಬೋಳಸೂರ ಕಾರ್ಯಕ್ರಮ ನಿರೂಪಿಸಿದರು ಶ್ರೀ ಎಸ್.ಎಸ್. ಬೊಮ್ಮನಳ್ಳಿ ವಂದಿಸಿದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ತಾಲೂಕಾ ಸಂಸ್ಥೆ ವಿಜಾಪುರ ಗ್ರಾಮೀಣ ಇವರ ಬೇಡಿಕೆಗೆ ಸ್ಪಂದಿಸಿದ ವಿಜಾಪುರ ಜಿಲ್ಲಾ ಮಹಿಳಾ ಬ್ಯಾಂಕು ರೂ. 4,000-00 ದೇಣಿಗೆಯ ಚೆಕ್ಕನ್ನು ತಾಲೂಕಾ ಕಾರ್ಯದರ್ಶಿ ಶ್ರೀ ಪಿ.ಎಸ್. ಕುಂಬಾರ ಅವರಿಗೆ ಬ್ಯಾಂಕಿನ ಅಧ್ಯಕ್ಷರಾದ ಶ್ರೀಮತಿ ಮೀನಾಕ್ಷಿ ಕಲ್ಲೂರ ಅವರು ನೀಡಿದರು. ಚೆಕ್ ಸ್ವೀಕರಿಸಿ ಮಾತನಾಡಿದ ಪಿ.ಎಸ್. ಕುಂಬಾರ ಅವರು ಸಾರ್ವಜನಿಕರ ಹಾಗೂ ದಾನಿಗಳ ನೆರವಿನಿಂದ ನಡೆದು ಬರುತ್ತಿರುವ ತಾಲ್ಲೂಕಾ ಸಂಸ್ಥೆಗೆ ಈ ಬ್ಯಾಂಕಿನಿಂದ ಪಡೆದ ದೇಣಿಗೆ ಹಣದಲ್ಲಿ ಮಕ್ಕಳ ಹಾಗು ಶಿಕ್ಷಕರ ತರಬೇತಿ, ಕಾರ್ಯಕ್ರಮಗಳಿಗೆ ಅಗತ್ಯವಾದ ಜಮಖಾನೆಗಳನ್ನು ಖರೀದಿಸಲಾಗುವದೆಂದು ತಿಳಿಸಿ ಬ್ಯಾಂಕಿನ ಎಲ್ಲ ಪದಾಧಿಕಾರಿಗಳನ್ನು ಹಾಗೂ ಸಿಬ್ಬಂದಿಯವರನ್ನು ಅಭಿನಂದಿಸಿದರು. ಜೊತೆಯಲ್ಲಿ ಜಿಲ್ಲಾ ಪ್ರತಿನಿಧಿ ಶ್ರೀ ಶರಣು ಸಬರದ ಮತ್ತು ಬ್ಯಾಂಕಿನ ವ್ಯವಸ್ಥಾಪಕಿ ಶ್ರೀಮತಿ ನೀಲಮ್ಮ ಲೋಣಿ ಉಪಸ್ಥಿತರಿದ್ದರು.

## ದಾವಣಗೆರೆ

ದಿನಾಂಕ : 08-07-2012 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದಾವಣಗೆರೆ ನೇತಾಜಿ ಸ್ಕೌಟ್ ಮತ್ತು ಚೇತನ ಗೈಡ್ ಗ್ರೂಪ್ ವತಿಯಿಂದ ವಿಶ್ವಪರಿಸರ ದಿನಾಚರಣೆಯನ್ನು ಕುಂದವಾಡ ಕೆರೆಯ ಬಳಿಯಲ್ಲಿ ಹಮ್ಮಿಕೊಳ್ಳಲಾಗಿತ್ತು. ಪರಿಸರದ ಬಗ್ಗೆ ಸಾರ್ವಜನಿಕರಲ್ಲಿ ಅರಿವು ಮೂಡಿಸುವುದು ಹಾಗೂ ಮಕ್ಕಳು ತಯಾರಿಸಿದ ಪೇಪರ್ ಬ್ಯಾಗ್‌ಗಳನ್ನು ಸಾರ್ವಜನಿಕರಿಗೆ ಹಂಚುವುದರ ಮೂಲಕ ಸಾರ್ವಜನಿಕರಲ್ಲಿ ಪ್ಲಾಸ್ಟಿಕ್‌ನ್ನು ನಿಷೇಧಿಸಿ, ಪೇಪರ್ (ಕಾಗದ ಚೀಲ) ಬ್ಯಾಗ್‌ಗಳನ್ನು ಬಳಸಿ ಎಂದು ಹೇಳುವುದು ನಮ್ಮ ಮುಖ್ಯ ಉದ್ದೇಶವಾಗಿತ್ತು. ಹಾಗಾಗಿ ಸುಮಾರು 400 ಮಕ್ಕಳು ತಯಾರಿಸಿದ ಪೇಪರ್ ಬ್ಯಾಗ್‌ಗಳನ್ನು ಸಾರ್ವಜನಿಕರಿಗೆ ಹಂಚಲಾಯಿತು. ಇದಕ್ಕೂ ಮುನ್ನ ನೇತಾಜಿ ಸ್ಕೌಟ್ ಗ್ರೂಪ್ ಹಾಗೂ ಚೇತನ ಗೈಡ್ ಗ್ರೂಪ್‌ನ 200 ಸ್ಕೌಟ್-ಗೈಡ್‌ಗಳು ಸ್ಕೌಟ್ ಭವನದಿಂದ ಕುಂದುವಾಡ ಕೆರೆಯವರೆಗೂ ಸೈಕಲಿಂಗ್ ಹೊರಡುವುದರ ಮೂಲಕ ತಮ್ಮ ಪರಿಸರ ಕಾಳಜಿಯನ್ನು ವ್ಯಕ್ತಪಡಿಸಿದರು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿಯವರು ವಹಿಸಿಕೊಂಡಿದ್ದರು. ಮಾನ್ಯ ಜಿಲ್ಲಾಧಿಕಾರಿಗಳಾದ ಶ್ರೀ ಎಸ್.ಎಸ್. ಪಟ್ಟಣಶೆಟ್ಟಿ ಭಾ.ಆ.ಸೇ. ಯವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎ.ಪಿ. ಷಡಾಕ್ಷರಪ್ಪ ಮತ್ತು ಗೈಡ್ ಆಯುಕ್ತರಾದ ಶ್ರೀಮತಿ ಪುಟ್ಟಮ್ಮಮಹರುದ್ರಯ್ಯರವರು ಈ ಕಾರ್ಯಕ್ರಮಕ್ಕೆ ಅತಿಥಿಗಳಾಗಿ ಆಗಮಿಸಿದ್ದರು. ಎ.ಎಸ್.ಓ.ಸಿ. ಆದ ಶ್ರೀಮತಿ ಮಂಜುಳ ಸಿ. ಶ್ರೀಮತಿ ಶಶಿಕಲಾ, ಶ್ರೀಮತಿ ಉಷಾ ಸಾವಳಗಿ, ದಕ್ಷಿಣವಲಯದ ಕಾರ್ಯದರ್ಶಿಗಲಾದ ಶ್ರೀ ಮರುಳಪ್ಪ. ಸಿ ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಎಂ. ಚಂದ್ರಪ್ಪನವರು ಉಪಸ್ಥಿತರಿದ್ದರು. ಈ ಕಾರ್ಯಕ್ರಮಕ್ಕೆ ಪೋಷಕರು ಸಹ ಆಗಮಿಸಿ ಸ್ಕೌಟ್ ಗೈಡ್‌ಗಳ ಚಟುವಟಿಕೆಯನ್ನು ಪ್ರೋತ್ಸಾಹಿಸಿದರು. ನೇತಾಜಿ ಸ್ಕೌಟ್ ಗ್ರೂಪ್‌ನ ನಾಯಕರಾದ ಜೆ.ಎಸ್. ವಿಜಯ್‌ರವರು ತಮ್ಮ ಪ್ರಾಸ್ತಾವಿಕ ನುಡಿಗಳಲ್ಲಿ ಪರಿಸರ ಕಳಕಳಿಯನ್ನು ವ್ಯಕ್ತಪಡಿಸಿದರು. ಮುಖ್ಯಅತಿಥಿ ಮಾನ್ಯ ಜಿಲ್ಲಾಧಿಕಾರಿ ಶ್ರೀ ಎಸ್.ಎಸ್. ಪಟ್ಟಣಶೆಟ್ಟಿಯವರು ಸ್ಕೌಟ್ಸ್ - ಗೈಡ್ಸ್‌ಗಳಿಗೆ ಪರಿಸರ ಜಾಗೃತಿಯತೆಯನ್ನು ಕುರಿತು, ಪರಿಸರದಲ್ಲಾಗುವಂತಹ ಬದಲಾವಣೆಯನ್ನು ಕುರಿತು ಪರಿಸರದ ಬಗ್ಗೆ ಅರಿವನ್ನು ಮೂಡಿಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿಯವರು ಮಾತನಾಡಿ ಪರಿಸರ ನಮ್ಮ ಒಡೆತನದಲ್ಲಿ ಹಿಂದಿನ ಪೀಳಿಗೆಗೆ ಬಿಟ್ಟುಹೋಗಬೇಕು ಎಂದು ಸ್ಕೌಟ್ ಗೈಡ್‌ಗಳಿಗೆ ತಿಳಿಸಿಕೊಟ್ಟರು.

## ದಕ್ಷಿಣ ಕನ್ನಡ

ದಿನಾಂಕ : 04-06-2012 ರಿಂದ 08-06-2012 ರ ವರೆಗೆ ಉತ್ತರಖಾಂಡ್ ರಾಯವಾಲದಲ್ಲಿ ನಡೆದ ರೋವರ್ಸ್ ರೇಂಜರ್ಸ್ ಸಮಾಗಮದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಎಸ್.ಡಿ.ಎಂ, ಅಳ್ವಸ್, ಎಸ್. ಎಂ. ಕುಶೆ ಕಾಲೇಜುಗಳ 4 ರೋವರ್ಸ್ 4 ರೇಂಜರ್ಸ್ ಹಾಗೂ ಧವಳ ಕಾಲೇಜಿನ ರೋವರ್ ಸ್ಕೌಟ್ಸ್ ಲೀಡರ್ ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿರುವರು.

ದಿನಾಂಕ : 01-07-2012 ರಂದು ವೈದ್ಯರ ದಿನದಂದು ಎಸ್. ಎಂ. ಕುಶೆ, ಅತ್ತಾವರ ವಿದ್ಯಾ ಸಂಸ್ಥೆಯ ಸ್ಕೌಟ್ಸ್ ಗೈಡ್ಸ್ ರೋವರ್ಸ್ ಹಾಗೂ ರೇಂಜರ್ಸ್ ಅತ್ತಾವರ ಪರಿಸರದಲ್ಲಿ 200 ಮನೆಗಳಿಗೆ ಬೇಟಿ ನೀಡಿ ಆರೋಗ್ಯದ ಬಗ್ಗೆ, ಪರಿಸರದ ಶುಚಿತ್ವದ ಬಗ್ಗೆ, ಮಾರಕ ರೋಗಗಳಾದ ಮಲೇರಿಯಾ ಡೆಂಗೂ, ಆನೆ ಕಾಲು, ಇವುಗಳ ಬಗ್ಗೆ ಮಾಹಿತಿನೀಡಿ ಕರಪತ್ರಗಳನ್ನು ನೀಡಿದರು, ಅಲ್ಲದೆ ಕೆ.ಎಂ.ಸಿಯವರ ಆರೋಗ್ಯ ಕಾರ್ಡ್‌ನ ಉಪಯೋಗದ ಬಗ್ಗೆ ತಿಳಿಸಿ ಅದನ್ನು ಸದುಪಯೋಗ ಮಾಡುವಂತೆ ತಿಳಿಯಪಡಿಸಿದರು.

## ಚಾಮರಾಜನಗರ

2012-13ನೇ ಸಾಲಿನ ತೃತೀಯ ಸೋಪಾನ ಪರೀಕ್ಷಾ ಶಿಬಿರವನ್ನು ದಿನಾಂಕ 27-06-2012 ರಿಂದ 30-06-2012 ರ ವರೆಗೆ ಕೊಳ್ಳೇಗಾಲದ ಶ್ರೀ ರಾಜರಾಜೇಶ್ವರಿ ಕಲ್ಯಾಣ ಮಂಟಪದಲ್ಲಿ ನಡೆಸಲಾಗಿದ್ದು 17 ಶಾಲೆಗಳಿಂದ 91 ಸ್ಕೌಟ್ಸ್ -32 ಗೈಡ್ಸ್ ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಶ್ರೀ ವೆಂಕಟರಮಣಶೆಟ್ಟಿ ಹೆಚ್.ಡಬ್ಲ್ಯೂ.ಬಿ. ಸ್ಕೌಟ್ ವಿಭಾಗಕ್ಕೆ ಹಾಗೂ ಗೈಡ್ ವಿಭಾಗಕ್ಕೆ ಕು॥ ಕಮಲಮ್ಮನಾಯಕಿಯಾಗಿ ಕರ್ತವ್ಯ ನಿರ್ವಹಿಸಿದರು. ದಿನಾಂಕ 30-06-2012 ರಂದು ನಡೆದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಜಿ.ಆರ್. ಅಶ್ವಥ್‌ನಾರಾಯಣರವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ವಿ. ಮಲ್ಲಿಕಾರ್ಜುನಸ್ವಾಮಿ ಜಿಲ್ಲಾ ಆಯುಕ್ತರು (ಸ್ಕೌ.) ಶ್ರೀಮತಿ ಬರ್ನಡೆಟ್‌ಲೇವಿಸ್ ಜಿಲ್ಲಾ ಆಯುಕ್ತರು(ಗೈ) ಹಾಗೂ ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಚಂದ್ರಶೇಖರಯ್ಯನವರು ಉಪಸ್ಥಿತರಿದ್ದರು. ಸಮಾರಂಭದಲ್ಲಿ ಮಕ್ಕಳಿಗೆ ತೃತೀಯ ಸೋಪಾನದ ಪ್ರಮಾಣ ಪತ್ರಗಳನ್ನು ವಿತರಣೆ ಮಾಡಲಾಯಿತು. ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಕೆ.ಎಸ್. ಮಹಾದೇವಸ್ವಾಮಿಯವರು ಅಭಿನಂದನೆ ಸಲ್ಲಿಸಿದರು.

## ರಾಯಚೂರು

ವಿಶ್ವ ಪರಿಸರ ದಿನಾಚರಣೆ ಪ್ರಯುಕ್ತ ದಿನಾಂಕ 05-06-2012 ರಂದು ಸ.ಹಿ. ಪ್ರಾ.ಶಾಲೆ ಸೋಮಲಾಪುರ ಶಾಲೆಯಲ್ಲಿ ಭಗತ್‌ಸಿಂಗ್ ಸ್ಕೌಟ್ಸ್ ಘಟಕ ಹಾಗೂ ಕಿತ್ತೂರು ರಾಣಿ ಚೆನ್ನಮ್ಮ ಗೈಡ್ಸ್ ಘಟಕದ ವತಿಯಿಂದ ಸಸಿನೆಡುವ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದು, ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶಲೆಯ ಮುಖ್ಯ ಗುರುಗಳಾದ ಶ್ರೀ ಎಂ.ಬಿ. ದೊಡ್ಡಮನಿ, ವಹಿಸಿದ್ದರು. ಮುಖ್ಯ ಅತಿಥಿಗಳ ಸ್ಥಾನವನ್ನು ಎಸ್.ವಿ. ಕ್ಯಾಂಪ್‌ನ ಸಿ.ಆರ್.ಪಿ. ಗಳಾದ ಶ್ರೀ ಪಂಪಾಪತಿ ಹಾಗೂ ಸರಕಾಗಿ ಪ್ರೌಢಶಾಲೆ ಸೋಮಲಾಪುರ ಶಾಲೆಯ ಮುಖ್ಯಗುರುಗಳಾದ ಶ್ರೀಮತಿ ನಿಶಾರ್ ಬಿ. ವಹಿಸಿಕೊಂಡಿದ್ದರು. ಹಾಗೂ ಕಾರ್ಯಕ್ರಮದಲ್ಲಿ ಎಲ್ಲಾ ಶಿಕ್ಷಕ ವೃಂದದವರು ಉಪಸ್ಥಿತರಿದ್ದರು.

ಕಾರ್ಯಕ್ರಮದ ಉಸ್ತುವಾರಿಯನ್ನು ಸ್ಕೌಟ್ಸ್ ಮಾಸ್ಟರ್‌ರಾದ ಶ್ರೀ ರಾಜುನಾಯ್ಕರವರು ವಹಿಸಿಕೊಂಡಿದ್ದರು. ಅಧ್ಯಕ್ಷರು, ಅತಿಥಿಗಳು, ಸ್ಕೌಟ್ಸ್ ಮಾಸ್ಟರುಗಳು, ಸಸಿಸಗಳನ್ನು ನೆಟ್ಟರು ನಂತರ ಮಾತನಾಡಿದ ಸಿ.ಆರ್.ಪಿ.ಗಳು ಪರಿಸರದ ಮಹತ್ವ ಮತ್ತು ರಕ್ಷಣೆ ಕುರಿತು ಮಕ್ಕಳಿಗೆ ತಿಳಿಸಿದರು.

ಅಧ್ಯಕ್ಷರು ಪರಿಸರ ಸಮತೋಲನ ಕಾಪಾಡುವಲ್ಲಿ ಪ್ರತಿಯೊಬ್ಬರು ಶ್ರಮಿಸಬೇಕೆಂದು ಹಾಗು ಒಂದೊಂದು ಸಸಿಗಳನ್ನು ಕಡ್ಡಾಯವಾಗಿ ಬೆಳಸಬೇಕೆಂದು ಸ್ಕೌಟ್ಸ್ -ಗೈಡ್ಸ್‌ಗಳಿಗೆ ತಿಳಿಸಿದರು.

## ಉತ್ತರ ಕನ್ನಡ

ದಿನಾಂಕ 31-03-2012 ರಂದು ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಹದ್ದಿನಬಾಳ ಶಾಲೆಯಲ್ಲಿ ಶ್ರೀ ಚೆನ್ನಭೈರಾದೇವಿ ಬುಲ್ ಬುಲ್ ಘಟಕದ ಉದ್ಘಾಟನೆ ಮಾಡಲಾಯಿತು.

ಉದ್ಘಾಟನಾ ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಶ್ರೀ ವಿ.ಡಿ. ಬೋಗೇರ, ಸಮನ್ವಯಾಧಿಕಾರಿಗಳು, ಹಾಗೂ ಶ್ರೀ ಜನಾರ್ಧನ ನಾಯ್ಕ ಬಿ.ಆರ್.ಪಿ. ಹೊನ್ನಾವರ. ಶ್ರೀ ಕೆ.ಕೆ. ಶೋಟ ಹಿರಿಯ ಸ್ಕೌಟ್, ಶ್ರೀ ಎಸ್.ಎಂ. ಲೋಪಿಸ್, ಜಿಲ್ಲಾ ಸ್ಕೌಟ್ ಸಂಘಟಕರು ಹಾಜರಿದ್ದು 192 ಬುಲ್ ಬುಲ್ ಗಳಿಗೆ ಶುಭಕೋರಿದರು. ಶ್ರೀಮತಿ ಶಾರದಾ ಎಂ. ಹೆಗಡೆ ಫ್ಲಾಕ್ ಲೀಡರ್ ಕಾರ್ಯಕ್ರಮ ನಿರೂಪಿಸಿದರು. ಮುಖ್ಯ ಶಿಕ್ಷಕಿ ಶ್ರೀಮತಿ ಯಮುನಾ ಭಟ್, ಎಲ್ಲರನ್ನು ಸ್ವಾಗತಿಸಿದರು. ವಂದನಾರ್ಪಣೆ ಗೈದರು. ಶಾಲಾಭಿವೃದ್ಧಿ ಸಮಿತಿ ಅಧ್ಯಕ್ಷರಾದ ಶ್ರೀ ಸುಬ್ರಮಣ್ಯ ಭಟ್ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದು ಮಕ್ಕಗಳಿಗೆ ಹರಸಿದರು.

## ಕೊಪ್ಪಳ

ದಿನಾಂಕ 6-7-2012 ರಂದು ಗಂಗಾವತಿ ತಾಲ್ಲೂಕಿನ ಸ್ಕೌಟರ್ಸ್-ಗೈಡರ್ಸ್ ಸಮಾವೇಶ ವೈದ್ಯಕೀಯ ಭವನದಲ್ಲಿ ನಡೆಯಿತು. ಅಧ್ಯಕ್ಷತೆಯನ್ನು ಶ್ರೀಮತಿ ಹೇಮಲತಾ ವಸ್ತ್ರದ್ ಗೈಡ್ ಜಿಲ್ಲಾ ಆಯುಕ್ತರು ವಹಿಸಿದ್ದರು. ಗಂಗಾವತಿ ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಮಲ್ಲಪ್ಪ ಬೆಂಚ್‌ಮಟ್ಟಿ, ಶ್ರೀ ಜಯರಾಜ್ ಬೂಸದ್, ಶ್ರೀ ಸಂಗಯ್ಯ, ಶ್ರೀ ಯರ್ರಣ್ಣ, ಶ್ರೀ ಚೆನ್ನಬಸಪ್ಪ ವೇದಿಕೆಯಲ್ಲಿ ಉಪಸ್ಥಿತರಿದ್ದರು. ಗಂಗಾವತಿ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ದೊಡ್ಡ ಬಸಪ್ಪ ನೀರಲಶೇರಿ ಹಾಗೂ ಶ್ರೀರಾಮರಾವ್ ನಿರ್ದೇಶಕರು ಪಠ್ಯಪುಸ್ತಕ ನಿರ್ದೇಶನಾಲಯ ಡಿ.ಎಸ್.ಇ.ಆರ್.ಟಿ. ಬೆಂಗಳೂರು ಇವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು ಹಾಗೂ ಸ್ಕೌಟ್ಸ್ - ಗೈಡ್ಸ್ ಶಿಕ್ಷಕರು ಮಕ್ಕಳಲ್ಲಿ ಸೇವಾ ಮನೋಭಾವನೆ ಬೆಳೆಸಲು ಕರೆ ನೀಡಿದರು. 'ಶಿಕ್ಷಣರತ್ನ' ಪ್ರಶಸ್ತಿ ಪಡೆದ ಕ್ಷೇತ್ರ ಶಿಕ್ಷಣಾಧಿಕಾರಿಗಳನ್ನು ಸನ್ಮಾನಿಸಲಾಯಿತು.

ಸುಮಾರು 70 ಕ್ಕೂ ಹೆಚ್ಚು ಸ್ಕೌಟರ್ಸ್ -ಗೈಡರ್ಸ್ ಸಮಾವೇಶದಲ್ಲಿ ಭಾಗವಹಿಸಿದ್ದರು

## ತುಮಕೂರು

ದಿನಾಂಕ 18-06-2012 ರಂದು ಬಾಲಕರ ಪಾಠಶಾಲೆ ಕೊರಟಗೆರೆ ಇಲ್ಲಿ ತಾಲ್ಲೂಕಿನ ಸ್ಕೌಟ್ಸ್-ಗೈಡ್ಸ್ ಮತ್ತು ಕಬ್ ಬುಲ್ ಬುಲ್ ಶಿಕ್ಷಕರ ಸಮಾವೇಶ ನಡೆಸಲಾಯಿತು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಬಿ.ಎಸ್. ಮಹದೇವಯ್ಯನವರು ಎಲ್ಲರನ್ನು ಸ್ವಾಗತಿಸಿದರು. ಸಭೆಯಲ್ಲಿ ತುಮಕೂರು ಡಯಟ್‌ನ ಪ್ರಾಂಶುಪಾಲರಾದ ಶ್ರೀ ಈಶ್ವರಯ್ಯನವರು ಭಾಗವಹಿಸಿ ಮಕ್ಕಳಲ್ಲಿ ಶಿಸ್ತು, ಸನ್ನಡತೆ, ಕಲಿಸಲು ಸ್ಕೌಟ್ಸ್ ಮತ್ತು ಗೈಡ್ಸ್ ದಳಗಳನ್ನು ಶಾಲೆಗಳಲ್ಲಿ ತೆರೆಯುವಂತೆ ತಿಳಿಸಿದರು.

ಜಿಲ್ಲಾ ಸಂಘಟಕ ಶ್ರೀ ಕರಿಸಿದ್ದಪ್ಪನವರು ಹಲವಾರು ಉಪಯುಕ್ತ ಮಾಹಿತಿಯನ್ನು ನೀಡಿದರು. ಅಧ್ಯಕ್ಷತೆ ವಹಿಸಿದ್ದ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಐ.ಎಸ್. ಮಹೇಶ್ ರವರು ಮಾತನಾಡುತ್ತಾ ಎಲ್ಲಾ ಶಾಲೆಗಳಲ್ಲೂ ಸ್ಕೌಟ್ಸ್ ಮತ್ತು ಗೈಡ್ಸ್ ದಳ ತೆರೆಯುವಂತೆ ತಿಳಿಸಿದರು ಹಾಗೂ ಇದಕ್ಕೂ ತಮ್ಮ ಸಂಪೂರ್ಣ ಸಹಕಾರ ಇದೆ ಎಂದು ತಿಳಿಸಿದರು.

ಕಾರ್ಯದರ್ಶಿಗಳಾಗಿದ್ದ ಶ್ರೀ ಬಿ.ಎಸ್. ಮಹದೇವಯ್ಯನವರು ಬಡ್ತಿಹೊಂದಿ ಬೇರೆ ತಾಲ್ಲೂಕಿಗೆ ಹೋಗಿರುವುದರಿಂದ ಅವರಿಗೆ ತಾಲ್ಲೂಕು ಸಂಸ್ಥೆಯ ವತಿಯಿಂದ ಆತ್ಮೀಯವಾಗಿ ಸನ್ಮಾನಿಸಿ ಬೀಳ್ಕೊಡುಗೆ ನೀಡಲಾಯಿತು.

ಈ ಸಭೆಯಲ್ಲಿ ತಾಲ್ಲೂಕು ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ಅಹಮ್ಮದ್ ಷರೀಫ್, ಖಜಾಂಚಿಗಳಾದ ಶ್ರೀಮತಿ ಪಿ.ಎಸ್. ಗಂಗಮ್ಮನವರು, ಶ್ರೀ ಕೆ.ಎಸ್. ಜಗದೀಶಯ್ಯನವರು, ಶ್ರೀ ಕೃಷ್ಣಪ್ಪರೆಡ್ಡಿ, ಶ್ರೀ ಬಿ. ರಾಮಣ್ಣ ಹಾಗೂ ಎಲ್ಲಾ ಶಿಕ್ಷಕರು ಭಾಗವಹಿಸಿದ್ದರು.

## ಶಿವಮೊಗ್ಗ

ದಿನಾಂಕ : 23-06-2012 ಮತ್ತು 24-06-2012 ರಂದು ಸಾಗರ ತಾಲ್ಲೂಕಿನ ಶ್ರೀಧರಾಶ್ರಮ ವರದಹಳ್ಳಿ ಇಲ್ಲಿ ಜಿಲ್ಲಾ ಮಟ್ಟದ ಹಿಮಾಲಯ ವೃಕ್ಷಮಣಿದಾರಕರ ಸಮಾವೇಶವು ನಡೆಯಿತು. 30 ಜನ ಸ್ಕೌಟರ್ಸ್/ಗೈಡರ್ಸ್ ಗಳು ಭಾಗವಹಿಸಿದ್ದರು. ಶ್ರೀ ಎಂ. ನಾಗರಾಜ ಬಿ.ಇ.ಓ. ರವರು ಸಮಾವೇಶವನ್ನು ಉದ್ಘಾಟಿಸಿ ಎಲ್ಲಾ ಚಟುವಟಿಕೆಯಲ್ಲಿ ನನ್ನ ಸಹಕಾರ ಇದೆ ಹೆಚ್ಚು ಮಕ್ಕಳಿಗೆ ಇದರ ಉಯಪಯೋಗ ಸಿಗುವಂತೆ ಮಾಡಿ ಎಂದರು ಶ್ರೀ ರಾಧಾಕೃಷ್ಣ ನಾಯಕ ಭೇಂಗ್ರೆ, ಅಧ್ಯಕ್ಷರು, ನಗರಸಭೆ, ಸಾಗರ ಇವರು ತಮ್ಮ ಸಂಪೂರ್ಣ ಸಹಕಾರ ಯಾವಾಗಲೂ ನಿಮಗೆ ಇದೆ. ತಾವುಗಳು ನಗರ ಸಭೆಯ ಎಲ್ಲಾ ಕಾರ್ಯಕ್ರಮಗಳಲ್ಲಿ ಸಹಕರಿಸಿ ಎಂದರು. ಕಾರ್ಯಕ್ರಮದಲ್ಲಿ ಸಾಗರದ ಎಲ್ಲಾ ಏ.ಡಿ.ಸಿ.ಗಳು ಭಾಗವಹಿಸಿದ್ದರು.

ಡಿ.ಟಿ.ಸಿ. ಶ್ರಿ ಎಂ.ಜಿ. ಶಿವಕುಮಾರ್, ಡಿ.ಓಸಿ ಶ್ರೀ ಎನ್. ಆರ್. ಪ್ರಕಾಶ್ ಸ್ಕೈಬ್ ಶ್ರೀ ವೈ. ಆರ್. ವೀರೇಶಪ್ಪ. ಇವರು ತರಬೇತಿ ನಡೆಸಿಕೊಟ್ಟರು ಮುಕ್ತಾಯ ಸಮಾರಂಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಪ್ರೊ ಎ.ಎಸ್. ಚಂದ್ರಶೇಖರ್ ರಾಜ್ಯ ಉಪಾಧ್ಯಕ್ಷರಾದ ಶ್ರೀಮತಿ ಭಾರತಿ ಚಂದ್ರಶೇಖರ್ ಜಿಲ್ಲಾ ಆಯುಕ್ತರು ಶ್ರೀ ಎಸ್.ಜಿ. ಆನಂದ್, ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ್, ರವರು ಭಾಗವಹಿಸಿದ್ದರು. ಶ್ರೀ ಗಣಪತಿ ಕಾರ್ಯದರ್ಶಿ ಸಾಗರ ಸ್ಥಳೀಯ ಸಂಸ್ಥೆ ಇವರು ಮತ್ತು ಶ್ರೀಮತಿ ದೀಪಶ್ರೀ ಎಸ್. ಜಿಲ್ಲಾ ಸಂಘಟಕರು ಇವರು ಭಾಗವಹಿಸಿದ್ದರು.

## ರಾಯಚೂರು

ದಿನಾಂಕ 13-07-2012 ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಸ್ಥಳೀಯ ಸಂಸ್ಥೆ ರಾಯಚೂರು ತಾಲ್ಲೂಕು ಮಟ್ಟದ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶವನ್ನು ರಾಯಚೂರು ನಗರದ ಜೆ.ಸಿ.ಐ. ಭವನದಲ್ಲಿ ಹಮ್ಮಿಕೊಳ್ಳಲಾಗಿತ್ತು.

ಸಮಾವೇಶದ ಉದ್ಘಾಟನೆಯನ್ನು ಶ್ರೀ ಜಿ. ಮಲ್ಲಿಕಾರ್ಜುನ್ ಕ್ಷೇತ್ರ ಶಿಕ್ಷಣಾಧಿಕಾರಿಗಳು ರಾಯಚೂರು ಇವರು ಮಾತನಾಡುತ ಸೇವಾ ಮನೋಭಾವ, ಸಮಯ ಪ್ರಜ್ಞೆದೇಶಾಭಿಮಾನ, ಶಿಸ್ತು, ಸಹಕಾರ ಮನೋಭಾವನೆ ಬೆಳೆಸಲು ಸ್ಕೌಟ್ಸ್-ಗೈಡ್ಸ್‌ಗೆ ಸೇರುವುದರಿಂದ ಮಕ್ಕಳಲ್ಲಿ ಜಾಗೃತಿ ಮೂಡಲು ಸಾಧ್ಯವಾಗಿದೆ ಎಂದು ಹೇಳಿದರು. ಹಾಗೆ ಈ ವರ್ಷದಲ್ಲಿ ತಾಲ್ಲೂಕಿನ ಪ್ರತಿಯೊಂದು ಶಾಲೆಗಳಲ್ಲಿ ಘಟಕಗಳು ಕಡ್ಡಾಯವಾಗಿ ಪ್ರಾರಂಭಿಸುವಂತೆ ತಿಳಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರುಗಳು ಮಾತನಾಡಿ ಶಾಲೆಗಳಲ್ಲಿ ಘಟಕಗಳನ್ನು ಪ್ರಾರಂಭಿಸಿ ಆಸಕ್ತಿಯುಳ್ಳ ಮಕ್ಕಳಿಗೆ ಪ್ರೋತ್ಸಾಯಿಸಿ ಉತ್ತಮ ನಾಗರಿಕರನ್ನಾಗಿ ಮಾಡಲು ಶಿಕ್ಷಕರು ಪ್ರಯತ್ನಿಸಬೇಕೆಂದು ಹೇಳಿದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಸ್ಥಳೀಯಸಂಸ್ಥೆಯ ಅಧ್ಯಕ್ಷರಾದ ಶ್ರೀ ಎಸ್. ಗೋವಿಂದರಾಜು ವಹಿಸಿದ್ದರು. ಇದೇ ಸಂದರ್ಭದಲ್ಲಿ 100 ವಿದ್ಯಾರ್ಥಿಗಳಿಗೆ ಸ್ಕೌಟ್ಸ್ ಸಮವಸ್ತ್ರ

ನೀಡಲಾಗುವುದೆಂದು ತಿಳಿಸಿದರು. ಈ ಸಂದರ್ಭದಲ್ಲಿ ತಾಲ್ಲೂಕಿನ 2011ನೇ ಸಾಲಿನಲ್ಲಿ ರಾಜ್ಯ ಪುರಸ್ಕಾರ ಪ್ರಶಸ್ತಿ ಪಡೆದ ಸ್ಕೌಟ್ಸ್-ಗೈಡ್ಸ್‌ಗಳಿಗೆ ಪ್ರಶಸ್ತಿ ಪತ್ರಗಳನ್ನು ನೀಡಲಾಯಿತು. ಮುಕ್ತಾಯ ಸಮಾರಂಭದ ಮುಖ್ಯ ಅತಿಥಿಗಳಾಗಿ ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿಗಳಾದ ಶ್ರೀ ಎಸ್.ಹೆಚ್. ದೊಡ್ಡಮನಿಯವರು ಮಾತನಾಡಿ ಪ್ರತಿಯೊಂದು ಶಾಲೆಯಲ್ಲಿ ಘಟಕವನ್ನು ಕಡ್ಡಾಯವಾಗಿ ಪ್ರಾರಂಭಿಸುವಂತೆ ಹೇಳಿದರು.

ಈ ಸಂದರ್ಭದಲ್ಲಿ ಶ್ರೀ ಬಸವರಾಜ ಬೋರೆ ತಾಲ್ಲೂಕ ದೈಹಿಕ ವಿಷಯ ಪರಿವೀಕ್ಷಕರು ಮಾತನಾಡಿ ಪ್ರತಿಶಾಲೆಯ ಸ್ಕೌಟ್ ಮಾಸ್ಟರ್ ಘಟಕ ಪ್ರಾರಂಭಿಸಿ ಶಾಲೆಯ ಗೋಡೆಗಳ ಮೇಲೆ ಘಟಕದ ಹೆಸರುಗಳನ್ನು ಬರೆಸುವಂತೆ ಸೂಚಿಸಿದರು.

ದಿನಾಂಕ 20-07-2012 ರಂದು ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಹುಡಾದಲ್ಲಿ "ವನಮಹೋತ್ಸವ ಕಾರ್ಯಕ್ರಮ" ವನ್ನು "ವಿವೇಕಾನಂದ ಸ್ಕೌಟ್ಸ್ ಮತ್ತು ಗೈಡ್ಸ್ ತಂಡದವರು ಆಯೋಜಿಸಿದ್ದರು. ಇದೇ ಸಮಯದಲ್ಲಿ ತಂಡದವರಿಂದ ಶಾಲೆಗಾಗಿ 11 ಗಿಡಗಳನ್ನು ನೀಡಲಾಯಿತು. ಶಾಲಾ ಆವರಣದಲ್ಲಿ ಗಿಡಗಳನ್ನು ನೆಡುವುದರ ಮೂಲಕ ವನಮಹೋತ್ಸವ ಕಾರ್ಯಕ್ರಮ ಆದರಿಸಲಾಯಿತು.

ಈ ಕಾರ್ಯಕ್ರಮದಲ್ಲಿ ಶಾಲೆಯ ಮುಖ್ಯ ಗುರುಗಳಾದ ಶ್ರೀ ಕೃಷ್ಣಯ್ಯ ಡಿ. ಸಹಶಿಕ್ಷಕರುಗಳಾದ ಮಹಾಂತೇಶ ಕಂಚಿ, ಮಹಾಂತೇಶಹೋರಿ, ಸಂತೋಷಕುಮಾರ, ರಾಜೇಂದ್ರ ಹುಸೇನ್ ಸಾಬ ಅನಿಲ್‌ಕುಆರ್, ಪಂಪಾಪತಿ ಮಂಜುನಾಥ ಕೆ. ಎನ್ ಹಾಗೂ ಸ್ಕೌಟ್ಸ್ ಮಾಸ್ಟರ್ ರವಿ ಅಂತರವಳ್ಳಿ ಹಾಜರಿದ್ದರು.

ಹುಸೇನ್‌ಸಾಬ ನಿರೂಪಿಸಿದರು. ಮಂಜುನಾಥ್ ಸ್ವಾಗತಿಸಿದರು. ಪಾರಿಜಾತ ವಂದಿಸಿದಳು.

## ಉಡುಪಿ

ದಿನಾಂಕ 19-07-2012 ರಂದು ಸ.ಮಾ.ಹಿ. ಪ್ರಾ. ಶಾಲೆ. ವಡೇರಹೋಬಳಿ, ಕುಂದಾಪುರದಲ್ಲಿ ಸ್ಕೌಟರ್ಸ್ - ಗೈಡರ್ಸ್ ಸಮಾವೇಶ ನಡೆಯಿತು. ಶ್ರೀಮತಿ ಗುಣರತ್ನ, ಅಧ್ಯಕ್ಷರು, ಸ್ಥಳೀಯ ಸಂಸ್ಥೆ, ಕುಂದಾಪುರ, ಇವರು ಸಮಾವೇಶದ ಅಧ್ಯಕ್ಷತೆ ವಹಿಸಿದ್ದರು. ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಗೋಪಾಲ ಶೆಟ್ಟಿಯವರು ಕಾರ್ಯಕ್ರಮದ ಉದ್ಘಾಟನೆ ನೆರವೇರಿಸಿದರು. ಕಾರ್ಯಕ್ರಮದಲ್ಲಿ ಸಂಸ್ಥೆಯ ಉಪಾಧ್ಯಕ್ಷರುಗಳಾದ ಶ್ರೀ ಅಭಿನಂದನ ಶೆಟ್ಟಿ ಶ್ರೀ ದಿನಕರಪಟೇಲ್, ಶ್ರೀ ರಾಮಚಂದ್ರ ಉಪಾಧ್ಯಾಯ ಉಪಸ್ಥಿತರಿದ್ದರು. ವೇದಿಕೆಯಲ್ಲಿ ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಕೊಗ್ಗ ಗಾಣಿಗ, ಸ್ಥಾನೀಯ ಆಯುಕ್ತರಾದ ಶ್ರೀ ಆನಂದ ಅಡಿಗ, ಸಹಾಯಕ ರಾಜ್ಯ ಸಂಘಟನಾ ಆಯುಕ್ತ ಶ್ರೀ ಎಂ. ಪ್ರಭಾಕರ ಭಟ್ ಹಾಜರಿದ್ದರು. ಇದೇ ಸಂದರ್ಭದಲ್ಲಿ ದಿನಾಂಕ 17-07-2012 ರಂದು ನಿಧನರಾದ ಜಿಲ್ಲಾ ಸ್ಥಾನೀಯ ಆಯುಕ್ತರಾದ ದಿ|| ಬಿ.ಜಿ. ವಾರಂಬಳ್ಳಿಯವರಿಗೆ ಗೌರವಸೂಚಕವಾಗಿ ಮೌನ ಪ್ರಾರ್ಥನೆ ಮಾಡಲಾಯಿತು ಕಳೆದ ವರ್ಷ ತಾಲ್ಲೂಕು ಮಟ್ಟದ ರ್‍ಯಾಲಿಯನ್ನು ನಡೆಸಿದ ನಾಯಕ ಎಸ್.ವಿ.ಹಿ.ಪ್ರಾ. ಶಾಲೆಯ ಶ್ರೀ ನಾರಾಯಣ ಶೆಟ್ಟಿಯವರನ್ನು ಅಭಿನಂದಿಸಲಾಯಿತು. ಕಾರ್ಯದರ್ಶಿ, ಶ್ರೀ ಆನಂದ ಪೂಜಾರಿ ಸ್ವಾಗತಿಸಿ, ಶ್ರೀ ಪಿ.ಎನ್. ಐತಾಳ್ ಧನ್ಯವಾದ ನೆರವೇರಿಸಿದರು. ಕಾರ್ಯಕ್ರಮ ನಿರೂಪಣೆಯನ್ನು ಬುಲ್ ಬುಲ್ ಶಿಕ್ಷಕಿ ಶ್ರೀಮತಿ ಲತಾ ಕುಮಾರಿ ನೆರವೇರಿಸಿದರು.

ಉಡುಪಿ ಜಿಲ್ಲೆಯ ವಾರ್ಷಿಕ ಮಹಾಸಭೆ ದಿನಾಂಕ 21-07-2012 ರಂದು ಕಮಲಾ ಬಾಯ್ ಪ್ರೌಢಶಾಲೆಯಲ್ಲಿ ಜರುಗಿತು. ಶ್ರೀ ಪಿ. ರವೀಂದ್ರ ನಾಯಕ್ ಉಪಾಧ್ಯಕ್ಷರು, ಜಿಲ್ಲಾ ಸಂಸ್ಥೆ, ಉಡುಪಿ ಇವರ ಅಧ್ಯಕ್ಷತೆಯಲ್ಲಿ ಸಭೆ ಜರುಗಿತು. ಶ್ರೀಮತಿ ಜ್ಯೋತಿ ಜೆ. ಪೈ. ಉಪಾಧ್ಯಕ್ಷರು ಜಿಲ್ಲಾ ಸಂಸ್ಥೆ, ಶ್ರೀಮತಿ ಎಸ್.ಕೆ. ಪ್ರಭಾ ರಾಜ್ಯಕೇಂದ್ರ ಸ್ಥಾನೀಯ ಆಯುಕ್ತರು (ಗೈಡ್), ಡಾ. ರತ್ನ ಅರಸ್, ಸಹಾಯಕ ರಾಜ್ಯ ಆಯುಕ್ತೆ (ಗೈಡ್), ಶ್ರೀ ಎಡ್ವಿನ್ ಆಳ್ವ, ಜಿಲ್ಲಾ ಆಯುಕ್ತರು (ಸ್ಕೌಟ್), ಶ್ರೀ ಸೀತಾನದಿ

ವಿಠಲ್ ಶೆಟ್ಟಿ ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿಗಳು ಉಪಸ್ಥಿತರಿದ್ದು ಮಾರ್ಗದರ್ಶನ ನೀಡಿದರು. ಮುಂದಿನ 2 ವರ್ಷಗಳ ಅವಧಿಗೆ ಜಿಲ್ಲಾ ಮುಖ್ಯ ಆಯುಕ್ತರಾಗಿ ಆಯ್ಕೆಯಾದ ಶ್ರೀ ಕೆ.ಬಿ. ರಾವ್ ಎಲ್ಲರನ್ನು ಆತ್ಮೀಯವಾಗಿ ಸ್ವಾಗತಿಸಿದರು. ಶ್ರೀ ಶೇಖರ ಪೂಜಾರಿ 2011-12 ನೇ ಸಾಲಿನಲ್ಲಿ ವಾರ್ಷಿಕ ವರದಿ ಲೆಕ್ಕ-ಪತ್ರಗಳನ್ನು ಮಂಡಿಸಿದರು. ಶ್ರೀ ಎಂ. ಪ್ರಭಾಕರ ಭಟ್ ಸಹಾಯಕ ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) 2012-13ನೇ ಸಾಲಿನಲ್ಲಿ ಯೋಜಿತ ಕಾರ್ಯಕ್ರಮಗಳು ಹಾಗೂ ಶ್ರೀ ಕೊಗ್ಗ ಗಾಣಗ, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್) ಯೋಜಿತ ತರಬೇತಿಗಳ ಬಗ್ಗೆ ವಿವರ ನೀಡಿದರು. ಜಿಲ್ಲಾ ಸಹಕಾರ್ಯದರ್ಶಿ ಶ್ರೀಮತಿ ಜಯಮಾಲಿನಿ ದನ್ಯವಾದ ಸಮರ್ಪಿಸಿದರು.

# Bangalore North

## Shivajinagar LA

The Shivajinagar Local Association organised an Exhibition on the life and times of Lord Baden Powell and Lady Baden Powell as a mark of centenery year of Girl Guiding 2012. on 26th June 2012 at St. Alphonsus High School, Devices Road, Bangalore.

The Exhibition was inaugurated by Sr. Jessie. Asst. Dist Commissioner (Guides) Smt. Mythili Sampath, Leader Trainer (Guides) and former Asst. State Commissioner (Guides) mobilized the materials and collection for the exbition.Every body participated in the programme appriciated the efferts made by Smt. Mythili Sampath the Exhibition is organising the Exhibition which is an Educative and informative for the benifits of Scouts-Guides and the Unit Leaders.

Sri T.S. Lucas, State Commissioner (Scouts) was present Sr. Thresa, Head Mistress and Sr. Clara, Principal extended to organise this exhibition at their school officials from the Bangalore NorthDistrict visited the Exhibition

Smt. B. Revathi L.T.(B) and District Training Commissioner (G) Co-ordinated with help of the LA Office - Bearers , Unit Leaders, Scouts & Guides from many school visited the exhibition

## Patrol Leaders & Sixers Camp

The Shivajinagar Local Association organised patrol Leaders and Sixers camp on 14th July 2012 at St. Jhons High School, Pramenale Road, Bangalore Nearly 128 Cubs, Bul buls, Scouts and Guides attended the programme

The camp was Inaugurated by Sri Kiraba nandan, Asst. District Commissioner (Scouts) and Principal Stracey Memorial School, Sri T.S. Lucas, State Commissioner (Scout) visited the camp.

Miss Krupavijay, Secretary L.A. Mr. Gunasheelan, Asst. Secretary and Mr. Viswanatha Kakade Co-ordinated the Event

# Body Mind And Soul

**N. Srinivasan, LT(S)**
Headquarters Commissioner(S) BS&G, Karnataka

"A Peaceful Mind in a healthy Body helps one self to realize Soul"

Great Philosophers and thinkers have said that "Human birth" is the greatest of all births and we have to make best of it during our life time.

Whereas all the animals are having only Body, only human beings are endowed with mind and soul in addition. Human being without mind and soul is as good as an animal.

Only Human beings are gifted with mind characters like laughing, Crying, getting angry, love, hatred, emotions, differentiating between right and wrong etc.

One step higher than this is realization of self (Atmasakshatkara) ie., Soul. When one understands this, he is above human being, a saint, a monk, a mentor.

Different Stages are identified in the Life Span of a human being, depending upon the age, body growth, Mental Status, etc., But we can roughly identify 3 Staged 1) Childhood 2) Adulthood 3) Elder hood.

Incidentally, this three stages coincide with the development of the aspects cited above. During Childhood much importance and care is given for the healthy development and growth of the body. It is also the law of nature to be so.

As we pass on the adulthood our mind learns to think, appreciate, develop ralatonships, decide etc., The growth of the body slowly reaches an optimal stage, through there will be some minor changes in the body.

An ordinary human being just stops at this stage. They feel, having a strong body and a wise mind is enough for the life. But a few begin to think, at least later in the stage, about self and soul. It is an indication that the person is ripening.

It is very clear that searching for the soul starts during the adulthood only. But much attention is not given to it. In fact adulthood or the Youth is

the propertime to think about the Soul when the body and mind are intact. We have examples of Swami Vivekananda and Sri Shankaracharya, who made history as youths. Although their life span was short, their contribution to the welfare of the human being in general is enornomous. They are the Icons of Youth. The adulthood is the most precious period of the life span of a person. Any thing can be achieved during this time. But most of the youths never attempt to think about the soul.




A healthy body & Storng mind are the Primary requisites for realizing the self. Now a days we are passing through a crisis where people creave for power, fame & money and try to secure them by any possible means. This is due to the fact that have forgotten the soul. They have become soulless and selfish. If they become selfless they will be soulful.

Body, Mind & Soul are like the three vertices of a triangle. Body & Mind form the base of the Triangle. This base leads to the Soul which is at the Top. A complete Triangle indicates a complete person. Body, Mind & Soul will be mere dots if there are not properly connected. Hence one should try to become a complete person by nurturing all the three.

A strong body can be built through Physical exercises & Proper diet. Mind can be sharpened by reading books, Visiting Places, conversing with learned people. Reading Scriptures, Practicing Yoga, Meditation & leading a pious life can cleanse the soul.

Today's youths are tomorrow's rule makes. They are the destiny of the nation.

So determine and decide now to:

** Keep your body healthy & Strong

**be mentally alert

** realise self.

** become complete youth.

..............ಹಿಂದಿನ ಸಂಚಿಕೆಯಿಂದ

ಅಧ್ಯಾಯ – 3 **ಕಾರ್ಯಸರಣಿ** ಶಿಬಿರಾಗ್ನಿ ಉದಂತ ಸಂ – 8

## ಶಿಬಿರ ಜೀವನ (Camp Life)

### ಮಾರ್ಗ ಕಲ್ಪನೆ (Pioneering)

**ಗಂಟು ಹಾಕುವುದು – ಗುಡಿಸಲು ಕಟ್ಟುವುದು – ಮರವನ್ನು ಕೆಡವುವುದು – ಸೇತುವೆ ಕಟ್ಟುವುದು – ಸ್ವಂತ ಅಳತೆಗಳು – ಎತ್ತರ ಮತ್ತು ದೂರಗಳನ್ನು ಅಂದಾಜು ಮಾಡುವುದು**

**ಸವರುವುದು ಮತ್ತು ತುಂಡು ಮಾಡುವುದು :**

ಮರವು ಕೆಳಗೆ ಬಿದ್ದ ಮೇಲೆ, ಆ ಮರದ ಕೊಂಬೆ, ರೆಂಬೆಗಳನ್ನು, ಸವರಿ ಸಮ ಮಾಡಬೇಕು. ಈ ಕೆಲಸವನ್ನು ಬುಡದ ಕಡೆಯಿಂದ ಪ್ರಾರಂಭಿಸಿ, ತುದಿಯ ಕಡೆಗೆ ಹೋಗಬೇಕು. ಪ್ರತಿ ಕೊಂಬೆಯನ್ನೂ ಆದಷ್ಟೂ ಬುಡಕ್ಕೆ ಹತ್ತನಾಗಿ, ಬುಡದ ಕಡೆಯಿಂದ ಸವರಬೇಕು.

ಈಗ ಕಾಂಡವನ್ನು, ನಿಗದಿಪಡಿಸಿದ ಉದ್ದದ ತುಂಡುಗಳನ್ನಾಗಿ ಕತ್ತರಿಸಬೇಕು. ಕತ್ತರಿಸಲು ಗರಗಸವನ್ನು ಉಪಯೋಗಿಸಬೇಕು. ಮರದ ಗಾತ್ರದ ಅರ್ಧದಷ್ಟನ್ನು ಒಂದು ಕಡೆ ಕತ್ತರಿಸಿ, ಮರವನ್ನುರುಳಿಸಿ, ಉಳಿದ ಅರ್ಧಭಾಗವನ್ನು ಕತ್ತರಿಸಬೇಕು. ಎರಡನೆಯ ಭಾಗದಲ್ಲಿ ಕೊಯ್ಯುತ್ತಿದ್ದಂತೆಯೇ ತುಂಡುಗಳು ಬೇರೆಯಾಗುತ್ತವೆ. ಈ ರೀತಿಯಲ್ಲಿ ತುಂಡರಿಸಿ ದಿಮ್ಮಿಗಳನ್ನು ಮಾಡುವುದಕ್ಕೆ ಲಾಗಿಂಗ್ (Logging) ಎಂದು ಕರೆಯುತ್ತಾರೆ.



*ಚಿಲುಕ ಕಟ್ಟು (Parbuckle) ವಿಧಾನವು ಭಾರವಾದ ದಿಮ್ಮಿಗಳು ಅಥವಾ ಇತರೇ ವಸ್ತುಗಳನ್ನು, ಸಮರ್ಥ ರೀತಿಯಲ್ಲಿ ಸರಿಸುವ, ಸ್ಥಳಾಂತರಿಸುವ ವಿಧಾನವಾಗಿರುತ್ತದೆ.*

**ಸೇತುವೆ ಕಟ್ಟುವುದು**

ನಾನು ಈಗಾಗಲೇ ತಿಳಿಸಿರುವಂತೆ, ನನ್ನ ಸ್ಕೌಟುಗಳು ಮಾರ್ಗ ಕಲ್ಪಕರಾಗಿ ಕೆಲಸಮಾಡಿ, ಅಶಾಂತಿ ಪ್ರದೇಶದಲ್ಲಿ, ಸುಮಾರು 200 ಸೇತುವೆಗಳನ್ನು ಕಟ್ಟಬೇಕಾಯಿತು. ಇದಕ್ಕೆ ಬೇಕಾದ ಎಲ್ಲಾ ವಸ್ತು ಸಾಮಗ್ರಿಗಳನ್ನೂ, ಸ್ಥಳೀಯವಾಗಿ ದೊರಕುವ ವಸ್ತುಗಳ ಶೇಖರಣೆಯಿಂದ ಸರಿಮಾಡಿಕೊಳ್ಳಬೇಕಾಯಿತು.




*ಒಂದು ಸರಳವಾದ ಸೇತುವೆಯನ್ನು 2 ಕಾಲಟ್ಟ (Trestle) ಗಳಿಂದ ಕಟ್ಟಬಹುದು. ಚಿತ್ರದಲ್ಲಿ ವಿವಿಧ ಭಾಗಗಳ ವಿನ್ಯಾಸವನ್ನು ಸೂಚಿಸಲಾಗಿದೆ. ಕಾಲಟ್ಟದ ಮಧ್ಯದಲ್ಲಿ ಬರುವ ಕರ್ಣಕಟ್ಟನ್ನು (Diagonal lashing) ಬಿಟ್ಟರೆ ಉಳಿದೆಲ್ಲವುಗಳೂ ಚೌಕ ಕಟ್ಟುಗಳೇ (Square lashings).*

ಅನೇಕ ರೀತಿಗಳಲ್ಲಿ ಸೇತುವೆಗಳನ್ನು ಕಟ್ಟಬಹುದು. ಮಾರ್ಗ ಕಲ್ಪನೆಗಾಗಿ ಕಟ್ಟುವ ಸೇತುವೆಗಳಲ್ಲಿ, ಸಾಮಾನ್ಯವಾಗಿ ಮರದ ಕಂಬಗಳನ್ನು ಕಟ್ಟುಗಳ **(Lashing)** ಮೂಲಕ ಸೇರಿಸಲಾಗುತ್ತದೆ.

ಇಂಡಿಯಾದ ಹಿಮಾಲಯ ಪರ್ವತ ಪ್ರದೇಶಗಳಲ್ಲಿ, ಇಂಡಿಯನ್ನರು. ನದಿಯ ಮೇಲೆ, ದಡದಿಂದ ದಡಕ್ಕೆ, 3 ಹಗ್ಗಗಳನ್ನು ಎಳೆದು ಕಟ್ಟಿರುತ್ತಾರೆ. ಈ ಹಗ್ಗಗಳಲ್ಲಿ ಪ್ರತಿ ಕೆಲವು ಮೀಟರುಗಳಿಗೊಮ್ಮೆ × ಆಕಾರದಲ್ಲಿ ದಂಡಗಳನ್ನು ಬಿಗಿಸಿರುತ್ತಾರೆ. ಕೆಳಗಿನ ಹಗ್ಗವು, ನಡೆದು ಹೋಗಲು ದಾರಿಯಾದರೆ, ಮೇಲಿನ ಎರಡು ಹಗ್ಗಗಳು ಹಿಡಿದು ನಡೆಯಲು ಬರುತ್ತವೆ. ನಡೆಯುವಾಗ ಈ ಸೇತುವೆಗಳು ಬಳುಕುತ್ತವೆ. ಆದರೆ ನಿಮ್ಮನ್ನು ಸುಲಭವಾಗಿ ಆಚೆ ದಡ ಸೇರಿಸುತ್ತವೆ.



*ಟಾಮಿ : ಕೋಮಲ ಪಾದ ಸ್ಕೌಟ್ ನಂ. 3 : ಟಾಮಿಯು ಸೇತುವೆ ಕಟ್ಟುತ್ತಾನೆ. ಗಂಟುಗಳೇ ಸೇತುವೆಯ ಬಲವೆಂಬುದು, ನಿಮ್ಮ ಅರಿವು. ಟಾಮಿಯ ಸಡಿಲ ಕಟ್ಟುಗಳು (Lashings) ಮಾಡಿದುವು ತೆರವು.*

ಕಿರಿದಾದ, ಆಳದಲ್ಲಿ ಹರಿಯುವ ನದಿಯಾದರೆ, ದಡದಿಂದ ದಡಕ್ಕೆ ಬರುವಂತೆ, ಒಂದು ಮರವನ್ನೋ ಅಥವಾ ಅಕ್ಕ ಪಕ್ಕದಲ್ಲಿ 2 ಮರಗಳನ್ನೋ ಕೆಡವಿ ಸವರಿದರಾಯಿತು. ಮೇಲ್ಭಾಗವನ್ನು ಬಾಚಿಯಿಂದ ಕೆತ್ತಿ, ಮಟ್ಟ ಮಾಡಬಹುದು. ಹಿಡಿದು ನಡೆಯಲು ಅಕ್ಕಪಕ್ಕಗಳಲ್ಲಿ ಕಂಬಿ ಹಾಕಬಹುದು. ಇಷ್ಟೆಲ್ಲಾ ಮಾಡಿದರೆ ಪಕ್ಕಾ ಸೇತುವೆಯೇ ಆಯಿತು.

ನದಿಗಳನ್ನು ದಾಟಲು ತೆಪ್ಪಗಳನ್ನು ಉಪಯೋಗಿಸಬಹುದು. ನದಿಯ ದಡದಲ್ಲಿ (ಆಳವಿಲ್ಲದಿದ್ದರೆ, ನೀರಿನೊಳಗೆ; ಆಳವಾಗಿದ್ದರೆ ದಡದ ನೆಲದ ಮೇಲೆ) ತೆಪ್ಪವನ್ನು ಕಟ್ಟಿ, ತೆಪ್ಪವನ್ನು ಕಟ್ಟಿ ಮುಗಿಸಿದ ಬಳಿಕ ತೊರೆ(ನದಿ)ಯು ಇಳಿತದ ಕಡೆಯಲ್ಲಿ ಅದನ್ನು ಹಿಡಿದು, ದಡದ ಕಡೆಯಿಂದ, ನೀರಿನೊಳಕ್ಕೆ ತಳ್ಳಿರಿ. ತೊರೆಯ ನೀರು ತೆಪ್ಪವನ್ನು ಸರಿಯಾಗಿ ತೇಲಿಸಲಿ.



*ಹಿಮಾಲಯ ಪರ್ವತ ಪ್ರಾಂತ್ಯದಲ್ಲಿ, ಮೂಲನಿವಾಸಿಗಳು ಮೂರು ಹಗ್ಗಗಳಿಂದ ಸೇತುವೆಗಳನ್ನು ಕಟ್ಟುತ್ತ*

ಮುಂದುವರೆಯುವುದು..............

# THE BHARAT SCOUTS AND GUIDES, KARNATAKA

Equipment Department

Price List of Equipments

| S.N. | Particular | Rate in Rs. |
|---|---|---|
| 01 | Scout Belt(Bross Buckle) | 40.00 |
| 02 | Guide Belt (Bross Buckle) | 45.00 |
| 03 | Scout Cap | 40.00 |
| 04 | Cap Badge | 06.00 |
| 05 | Woggle | 02.00 |
| 06 | Cub Cap | 30.00 |
| 07 | Scarf | 20.00 |
| 08 | Knife | 25.00 |
| 09 | HWB Scarf | 25.00 |
| 10 | HWB Woggle | 15.00 |
| 11 | Commissioner Scarf | 25.00 |
| 12 | Lanyard (Guide) | 05.00 |
| 13 | Stockings (Block) | 42.00 |
| 14 | Socks (White) | 22.00 |
| 15 | Socks camel colour | 25.00 |
| 16 | Garter Tabs (Green) | 10.00 |
| 17 | Flag Top | 25.00 |
| 18 | C.D. NHQ (Sons) | 40.00 |
| 19 | Geethanjali Casset | 30.00 |
| | BADGES | |
| 01 | Pravesh Badge (Green) | 02.00 |
| 02 | World Brother Hood Badge | 02.00 |
| 03 | World Sister hood Badge | 02.00 |
| 04 | Pravesh Badge (Blue) | 01.00 |
| 05 | Pravesh Badge (Red) | 01.00 |
| 06 | Scout Master Rank Badge | 03.00 |
| 07 | Cub Master Rank Badge | 03.00 |
| 08 | R.S.L. Rank Badge | 03.00 |
| 09 | Bharat Scouts and Guides Name Badge | 02.00 |
| 10 | Pratam Soopan Badge | 01.00 |
| 11 | Dwitiya Sopan Badge | 01.00 |
| 12 | Tritiya Sopan Badge | 02.00 |
| 13 | Patrol Emblem (Guides) | 02.00 |
| 14 | Patrol Emblem (Bulbul) | 02.00 |
| 15 | Proficiency Badge (Ord) | 01.00 |
| 16 | Proficiency Badges (Spl) | 02.00 |
| 17 | Proficiency Badges (C&B) | 01.00 |
| 18 | Troop Leader Badge | 02.00 |

| | | |
|---|---|---|
| 19 | Asst. Troop Leader Badge | 02.00 |
| 20 | Solder Strips (Rover) | 20.00 |
| 21 | Commissioner Rank Badge | 03.00 |
| 22 | Komal Punk | 01.00 |
| 23 | Rajat Punk | 01.00 |
| 24 | Suvarna Punk | 01.00 |
| 25 | Pratam Charan | 01.00 |
| 26 | Dwitiya Charan | 01.00 |
| 27 | Tritiya Charan | 01.00 |

## Books

| | | |
|---|---|---|
| 01 | Cub Hand Book | 13.00 |
| 02 | Pravesh to Chaturta Charan | 23.00 |
| 03 | Scouting for Boys | 53.00 |
| 04 | Pravesh Scout | 08.00 |
| 05 | Pratam Sopan Scout | 07.00 |
| 06 | Aids to S.M. Ship | 15.00 |
| 07 | Scout Log Book-II | 24.00 |
| 08 | Scheme of Training(S) | 21.00 |
| 09 | Flock Leader Hand Book | 20.00 |
| 10 | Brownee Stories | 20.00 |
| 11 | A Book to Bloom | 22.00 |
| 12 | Pravesh Guide | 07.00 |
| 13 | APRO – Kan (Guide) | 15.00 |
| 14 | Guide Log Book –I | 34.00 |
| 15 | APRO – Rover (Kan) | 20.00 |
| 16 | Rovering to success | 40.00 |
| 17 | Rover Scouting | 11.00 |
| 18 | Jeevana Saphalatheya Marga(Kan) | 65.00 |
| 19 | APRO – Kan (Ranger | 05.00 |
| 20 | A Great Lady our Great inspiration | 60.00 |
| 21 | Sanitation Promoter | 03.00 |
| 22 | Citizen | 09.00 |
| 23 | Leprosy Control | 02.00 |
| 24 | 100 Glories of Scout Movement | 130.00 |
| 25 | Life Story of B.P. | 15.00 |
| 26 | Camp fire Hand Book | 08.00 |
| 27 | Transitional Analysis | 05.00 |
| 28 | Hand Book of Effective Trg. Sessions. | 20.00 |
| 29 | Scheme of Training (G) | 25.00 |
| 30 | Scout Master Kaipidi (Kan) | 50.00 |

ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ
Karnataka Scout & Guide News Magazine

Arise!

Awake!

And

Stop Not

Till

The

Goal

Is

Reached!

-swami vivekananda

Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227



**ಸಂಚಿಕೆಯ ವಾರ್ಷಿಕ ಚಂದಾ ರೂ. 50/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**
ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು



ದಿನಾಂಕ 29-06-2012ರಂದು ಬಳ್ಳಾರಿಯಲ್ಲಿ ನಡೆದ ರಾಜ್ಯಮಟ್ಟದ ಯುವ ಸಮಾವೇಶದ ಸಮಾರೋಪ ಸಮಾರಂಭದಲ್ಲಿ ಮುಖ್ಯತಿಥಿಗಳಾಗಿ ಶ್ರೀಮತಿ ಎಂ. ಜಿ. ಉಮಾ, ಪ್ರಧಾನ ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು, ಬಳ್ಳಾರಿ ಮತ್ತು ಶ್ರೀ ಹೆಚ್. ಹೊಸಮನಿ ಸಿದ್ದಪ್ಪ, ಪ್ರಿನ್ಸಿಪಾಲ್ ಸೀನಿಯರ್ ಸಿವಿಲ್ ನ್ಯಾಯಾಧೀಶರು, ಬಳ್ಳಾರಿ ಹಾಗೂ ಇತರರನ್ನು ಕಾಣಬಹುದು.




ದಿನಾಂಕ 27-06-2012ರಂದು ಬಳ್ಳಾರಿಯಲ್ಲಿ ನಡೆದ ರಾಜ್ಯಮಟ್ಟದ ಯುವ ಸಮಾವೇಶವನ್ನು ಶ್ರೀ ಜಿ. ಸೋಮಶೇಖರರೆಡ್ಡಿ, ಶಾಸಕರು, ಬಳ್ಳಾರಿ ಇವರು ಉದ್ಘಾಟಿಸುತ್ತಿರುವುದು. ಚಿತ್ರದಲ್ಲಿ ಶ್ರೀ ಡಿ. ವಿನೋದ್‌ಕುಮಾರ್, ಅಧ್ಯಕ್ಷರು, ಬಳ್ಳಾರಿ ನಗರಾಭಿವೃದ್ಧಿ ಪ್ರಾಧಿಕಾರ, ಡಾ॥ ಬಿ.ಕೆ. ಸುಂದರ್, ಖ್ಯಾತ ವೈದ್ಯರು, ಶ್ರೀ ಆರ್. ಪಾಂಡು, ಅಧ್ಯಕ್ಷರು, ಜಿಲ್ಲಾ ಸಂಸ್ಥೆ ಮತ್ತು ಶ್ರೀ ಆರ್. ವೆಂಕಣ್ಣ, ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಇತರರನ್ನು ಕಾಣಬಹುದು.



ದಿನಾಂಕ 01-07-2012ರಂದು ದಾವಣಗೆರೆಯ ಕುಂದವಾಡ ಕೆರೆಯ ಸ್ವಚ್ಛತಾ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್ಸ/ಗೈಡ್ಸ್‌ಗಳು. ಶ್ರೀ ಎಸ್.ಎಸ್. ಪಟ್ಟಣಶೆಟ್ಟಿ, ಭಾ.ಆ.ಸೇ, ದಾವಣಗೆರೆ ಜಿಲ್ಲಾಧಿಕಾರಿ ಭಾಗವಹಿಸಿ ಶುಭಹಾರೈಸಿದರು.




ದಿನಾಂಕ 9-7-2012ರಂದು ಹಾಸನ ಜಿಲ್ಲಾ ಸ್ಕೌಟ್-ಭವನದಲ್ಲಿ ನಡೆದ ಜಿಲ್ಲಾ ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶದಲ್ಲಿ ಶ್ರೀಮತಿ ಸಿ.ಎನ್. ಗಾಯತ್ರಿದೇವಿ, ಗೈಡ್ ಕ್ಯಾಪ್ಟನ್ ಇವರನ್ನು ಶ್ರೀ ಹೆಚ್.ಎಸ್. ಪ್ರಕಾಶ್, ಶಾಸಕರು, ಸನ್ಮಾನಿಸುತ್ತಿರುವುದು ಚಿತ್ರದಲ್ಲಿ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಸುರೇಶ್ ಗುರೂಜಿ, ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಶೈಲಾ ಅಭಿನಂದನ್, ತರಬೇತಿದಾರರಾದ ಶ್ರೀಮತಿ ಪಿ. ಸಿ. ಮಂಗಳೂರು ಇತರರನ್ನು ಚಿತ್ರದಲ್ಲಿ ಕಾಣಬಹುದು.



ಜೂನ್ 4 ರಿಂದ 8ರವರೆಗೆ ಉತ್ತರಖಾಂಡ ರಾಯವಾಲದಲ್ಲಿ ನಡೆದ ರೋವರ್/ರೇಂಜರ್ ಸಮಾಗಮದಲ್ಲಿ ಕರ್ನಾಟಕದ ರೋವರ್ಸ್/ರೇಂಜರ್ಸ್ ತಯಾರಿಸಿದ ಆಹಾರವನ್ನು ಪರೀಕ್ಷಿಸುತ್ತಿರುವ ಶ್ರೀಮತಿ ಗೀತಾರಾವತ್, ಜಂಟಿ ನಿರ್ದೇಶಕರು (ಗೈಡ್ಸ್), ರಾಷ್ಟ್ರೀಯ ಕಛೇರಿ ನವದೆಹಲಿ. ಚಿತ್ರದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ರೋವರ್/ರೇಂಜರ್ಸ್‌ಗಳು ಆಹಾರ ತಯಾರಿಸುತ್ತಿರುವುದು.

Regd. as News Paper (Magazine) RNI No : 13348/1959. Postal Regd. No KA/BGW-549/2012-2014
Permitted to Post under WPP System. Vide No.: WPP-87.
Posted at: Mail Business Centre, Bangalore GPO on 30-07-2012 (No. of Pages : 4 + 24 = 28)

## ವಿವಿದ ಚಟುವಟಿಕೆಗಳಲ್ಲಿ ಭಾಗವಹಿಸಿರುವ ಸ್ಕೌಟ್ಸ್-ಗೈಡ್ಸ್‌ಗಳು











ದಿ. 09-07-2012 ರಂದು ಜರುಗಿದ ಹಾಸನ ಜಿಲ್ಲೆ "ಸ್ಕೌಟರ್ಸ್-ಗೈಡರ್ಸ್ ಸಮಾವೇಶ"ದಲ್ಲಿ ಭಾಗವಹಿಸಿದ ದಳನಾಯಕರುಗಳು.



ರಾಯಚೂರು ಜಿಲ್ಲೆ ಹುಡಾ ಗ್ರಾಮದಲ್ಲಿ ದಿ. 20-07-2012 ರಂದು ನಡೆದ "ವನಮಹೋತ್ಸವ" ಕಾರ್ಯಕ್ರಮ



SCOUTS®
Creating a Better World



If not delivered, please return to :
THE EDITOR, Karnataka Scout & Guide
State Headquarters, Kondajji Basappa Road.
Prof. P. Sivashankar Circle, Fort
Bangalore - 560 002. Ph: 080-26701227

**Published by : The Bharat Scouts & Guides, Karnataka, State Headquarters, Fort, Bangalore - 560 002.**
**Publisher & Editor : M.A. Khalid. Printed by : L. Lingappa, M.D. at Sathyasri Printers Pvt. Ltd.,**
**16/1, 3rd Cross, 2nd Main, Kasturiba Nagar, Mysore Road, Bangalore - 560 026**